# ನಮ್ಮ ಮಾನಸ

**ನವೆಂಬರ್ 2008**

ಸಂಪುಟ : 2 ಸಂಚಿಕೆ : 7

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*

*Printed at*
***ILA Mudrana***
*No. 36, 40 Ft. Road,*
*Raghavanagara*
*New Timberyard Layout*
*Bangalore - 560 026.*
*✆ : 26757159*

## ಪರಿವಿಡಿ





●

*ಚಂದಾ ವಿವರ*

| | |
|---|---|
| **ಬಿಡಿಪ್ರತಿ** | **8–00 ರೂ.** |
| **ವಾರ್ಷಿಕ ಚಂದಾ** (ವಿಶೇಷ ಸಂಚಿಕೆಯೊಂದಿಗೆ) | **100–00 ರೂ.** |
| **ಸಂಸ್ಥೆಗಳಿಗೆ** | **150–00 ರೂ.** |

## ಓದುಗರ ಗಮನಕ್ಕೆ

*ಓದುಗರೆಲ್ಲರ ಸಹಕಾರ ಹಾಗೂ ಪ್ರೋತ್ಸಾಹದಿಂದ 'ನಮ್ಮ ಮಾನಸ'ದ ಪ್ರಕಟಣೆ ಸಾಧ್ಯವಾಗಿದೆ. ಪತ್ರಿಕೆಗೆ ಓದುಗರ ಚಂದಾ ಹಣವೇ ಜೀವಾಳ. ಚಂದಾಹಣ ಕಳುಹಿಸಿ ಮತ್ತು ಚಂದಾ ನವೀಕರಿಸಬೇಕಾದವರು ನವೀಕರಿಸಿ ಪತ್ರಿಕೆಯನ್ನು ಆರ್ಥಿಕವಾಗಿ ಸದೃಢಗೊಳಿಸಬೇಕೆಂದು ವಿನಮ್ರವಾಗಿ ಕೋರುತ್ತೇವೆ.*

***ವಾರ್ಷಿಕ ಚಂದಾ – ರೂ. 100/–***

# ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

– – –

***ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ ಚಂದಾ ನವೀಕರಣಕ್ಕೆ ಸಂಪರ್ಕಿಸಿ***

**ವೆಂ. ವನಜ**

*2329, 12ನೇ ಮೈನ್, 2ನೇ ಹಂತ, ವಿಜಯನಗರ*
*ಮೈಸೂರು – 570 017*



ಸಂಪಾದಕೀಯ

# ವಿದೇಶಿ ಕರೆನ್ಸಿ, ಲಾಭಾಂಶದ ಮೇಲೆ ಉತ್ಪಾದಕರ ಕಣ್ಣು; ಮೂಲೆಗುಂಪಾಗುತ್ತಿರುವ ದುಡಿಯುವ ಹೆಣ್ಣು

"ಟೆಕ್ಸ್‌ಟೈಲ್ ಮತ್ತು ಗಾರ್ಮೆಂಟ್ಸ್' ಜಗತ್ತಿನಾದ್ಯಂತ ಇರುವ ದೊಡ್ಡ ಕೈಗಾರಿಕೋದ್ಯಮ. ರಫ್ತು ಮಾಡುವುದಕ್ಕೋಸ್ಕರವೇ ಪ್ರತಿಯೊಂದು ದೇಶದಲ್ಲಿ ಬಟ್ಟೆ ತಯಾರಿಕೆ ನಡೆಯುತ್ತಿದೆ. ಪ್ರಪಂಚದಾದ್ಯಂತ ಅನೇಕ ಮಿಲಿಯನ್ ಪ್ರಮಾಣದಲ್ಲಿ ಇರುವ ಕಾರ್ಮಿಕರಲ್ಲಿ ಬಹುಪಾಲು ಮಹಿಳೆಯರೇ ಈ ಕೈಗಾರಿಕೋದ್ಯಮದಲ್ಲಿ ತೊಡಗಿಸಿಕೊಂಡಿದ್ದಾರೆ.

ಮಹಿಳೆಯರು ತಮ್ಮನ್ನು ತೊಡಗಿಸಿಕೊಂಡ ಮೊದಲ ಕೈಗಾರಿಕೋದ್ಯಮ ಕೂಡಾ ಗಾರ್ಮೆಂಟ್ ಆ್ಯಂಡ್ ಟೆಕ್ಸ್‌ಟೈಲ್ ವರ್ಕರ್ಸ್ ಯೂನಿಯನ್ ಆರ್ಥಿಕ ಹಕ್ಕನ್ನು ಅವರು ಕೇಳುವುದಕ್ಕೆ ಪ್ರಾರಂಭಿಸಿದ್ದೂ ಇಲ್ಲಿಯೇ. 1908 ಮಾರ್ಚ್ 8ರಂದು ಸೂಜಿ ಹಿಡಿದ ಕಾರ್ಮಿಕರು ನ್ಯೂಯಾರ್ಕ್ ಪಟ್ಟಣದಲ್ಲಿ ಮುಷ್ಕರ ಮಾಡಿದರು. ಕೆಲಸದ ಪರಿಸರದಲ್ಲಿ ಉತ್ತಮ ಗುಣಮಟ್ಟಗಳ ಬೇಡಿಕೆಯನ್ನು ಅವರು ಮುಂದಿಟ್ಟಿದ್ದರು. ಹಾಗಾಗಿ ಮಾರ್ಚ್ 8ರಂದು ಅಂತರರಾಷ್ಟ್ರೀಯ ಮಹಿಳಾ ದಿನವಾಗಿ ಆಚರಿಸಲ್ಪಡುತ್ತಿದೆ. 1911ರಲ್ಲಿ ಮೊದಲ ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯಾದ ವಾರದ ನಂತರ ನ್ಯೂಯಾರ್ಕ್‌ನ ಬಟ್ಟೆ ಕಾರ್ಖಾನೆಯೊಂದರಲ್ಲಿ ಬೆಂಕಿ ಅನಾಹುತದಿಂದಾಗಿ 140 ಜನ ಯುವ ಮಹಿಳಾ ಕಾರ್ಮಿಕರು ಮರಣವನ್ನಪ್ಪಿದರು. ಈ ದುರಂತವನ್ನು ಇಂದಿಗೂ ನೆನಪಿಸಿಕೊಳ್ಳಲಾಗುತ್ತಿದೆ.

1912ರಲ್ಲಿ ಮೆಸಾಚ್ಯುಸೆಟ್ಸ್‌ನ ಬಟ್ಟೆ ಕಾರ್ಖಾನೆಯ ಕಾರ್ಮಿಕರು 'ಬ್ರೆಡ್ ಆ್ಯಂಡ್ ರೋಸಸ್' ಎಂಬ ಬೇಡಿಕೆ ಮುಂದಿಟ್ಟು ಕೆಲಸ ಬಿಟ್ಟು ತೆರಳಿದರು. ಬದುಕುವುದೆಂದರೆ ಸುಮ್ಮನೇ ಜೀವಂತವಾಗಿರುವುದಲ್ಲ ಎಂಬುದನ್ನು ಸ್ಪಷ್ಟಪಡಿಸಿದ ಈ ಹೋರಾಟ, ಬೇಡಿಕೆಗಳು ಮಹಿಳಾ ಚಳವಳಿಯ ಮುಖ್ಯ ಅಂಶವಾಗಿದ್ದವು. ಅಲ್ಲಿಂದ ಇಲ್ಲಿಯವರೆಗೆ ಹೋರಾಟ ನಡೆಸುತ್ತಲೇ ಗಾರ್ಮೆಂಟ್ಸ್ ಮತ್ತು ಟೆಕ್ಸ್‌ಟೈಲ್‌ನ ಕಾರ್ಮಿಕರು ಕಾರ್ಖಾನೆಗಳಲ್ಲಿ ದುಡಿಯುತ್ತಾ ಬಂದಿದ್ದಾರೆ.

ಸಿದ್ಧಉಡುಪುಗಳ ಕಾರ್ಖಾನೆ ಮಹಿಳಾ ಉದ್ಯೋಗದ ಅವಕಾಶವನ್ನು ಪ್ರೋತ್ಸಾಹಿಸುತ್ತಿದೆ ಎಂಬ ತಪ್ಪು ತಿಳಿವಳಿಕೆ ಇದೆ. ಆದರೆ ಮಹಿಳೆಯರಲ್ಲಿ ಸಾಮಾಜಿಕ ಕಾರಣದಿಂದ ರೂಪುಗೊಂಡ ಅವರ ವಿಧೇಯತೆಯೇ ಈ ಕೈಗಾರಿಕೆಯ ಬೆನ್ನೆಲುಬಾಗಿ ಉಳಿದಿದೆ. ಭಾರತದಲ್ಲಿ ಕೃಷಿಯ ನಂತರದಲ್ಲಿ ಸಿದ್ಧಉಡುಪುಗಳ ಕಾರ್ಖಾನೆಯೇ ಅತಿ ದೊಡ್ಡ ಕೈಗಾರಿಕೆಯಾಗಿ ರೂಪುಗೊಂಡಿದೆ. ಪ್ರಾರಂಭದಲ್ಲಿ ಸಾಂಪ್ರದಾಯಿಕವಾಗಿದ್ದ ಶ್ರಮದ ನೈಪುಣ್ಯವನ್ನು ಆಧರಿಸಿ ಈ ಕೈಗಾರಿಕೆ ಭಾರತದಲ್ಲಿ ನಡೆಯುತ್ತಿತ್ತು. ಸ್ಥಳೀಯ ಗ್ರಾಹಕರಿಗಾಗಿ ಮಾತ್ರ ಸಿದ್ಧಉಡುಪುಗಳ ಉತ್ಪಾದನೆ ನಡೆಯುತ್ತಿತ್ತು. ಸ್ಥಳೀಯ ಮಾರುಕಟ್ಟೆಗಳ ಬೇಡಿಕೆಯನ್ನು ಪೂರೈಸುವುದಕ್ಕಾಗಿ ಮಾತ್ರ ಉತ್ಪಾದನೆಯ ಟಾರ್ಗೆಟ್ಸ್‌ಅನ್ನು ನಿಗದಿಪಡಿಸಲಾಗುತ್ತಿತ್ತು. ಆದರೆ ಜಾಗತೀಕರಣದ ಹಿನ್ನೆಲೆಯಲ್ಲಿ ಪ್ರಪಂಚದ ಮಾರುಕಟ್ಟೆ ಜೊತೆ ಕೊಂಡಿಗಳನ್ನು ಹೊಂದಿರುವ ಕಾರ್ಖಾನೆಗಳು 2005ರಲ್ಲಿ M F A (Multi Fibre Agreement Arrangement) ಕೋಟಾ ವ್ಯವಸ್ಥೆ ಹೋದ ಮೇಲೆ ಇದರ ಎಲ್ಲಾ ಲಾಭವನ್ನೂ ಉತ್ಪಾದಕರು ಪಡೆದುಕೊಳ್ಳಲಾರಂಭಿಸಿ ಮಹಿಳಾ ಕಾರ್ಮಿಕರ ಮೇಲೆ ಹೆಚ್ಚಿನ ಕೆಲಸದ ಹೊರೆ ಹಾಕಲಾರಂಭಿಸಿದ್ದಾರೆ.

ಉದಾಹರಣೆಗೆ ರೈವಾರವರು ಹೇಳುವಂತೆ ಬೆಂಗಳೂರನ್ನು ಗಾರ್ಡನ್‌ಸಿಟಿ ಎನ್ನುವ ಬದಲು ಗಾರ್ಮೆಂಟ್ ಸಿಟಿಯೆಂದು ಕರೆಯಬಹುದಾಗಿದೆ. ಕರ್ನಾಟಕ ಸರ್ಕಾರ 6 ಅಪ್ಯಾರಲ್ ಪಾರ್ಕ್‌ಗಳನ್ನು (I T P) (Integrated Textile Park) ದಾವಣಗೆರೆ, ಹಾರೋಹಳ್ಳಿ, ದೊಡ್ಡಬಳ್ಳಾಪುರ, ಬೀದರ್, ಬಳ್ಳಾರಿಯಲ್ಲಿ ಈಗಾಗಲೇ ಪ್ರಕಟ ಮಾಡಿದೆ. 200ರಿಂದ 500 ಎಕರೆ ಪ್ರದೇಶಗಳಲ್ಲಿ ನೇಯ್ಗೆ, ನೂಲುವುದು, ಬ್ಲೀಚಿಂಗ್, ಎಂಬ್ರಾಯ್‌ಡರಿ, ಟೈಲರಿಂಗ್ ಎಲ್ಲಾ ಯುನಿಟ್ಸ್‌ಗಳನ್ನು ಒಂದೇ ಕಡೆ ಮಾಡುವುದು ಇದರ ಉದ್ದೇಶ. ಈ ಯುನಿಟ್‌ಗಳೂ ಸಹ ಕಾರ್ಖಾನೆಗಳಂತೆ ರಫ್ತಿನ ದಿನಾಂಕ ಹಾಗೂ ಫ್ಯಾಷನ್ ಬೇಡಿಕೆಗಳಿಂದ ನಿಯಂತ್ರಿಸಲ್ಪಡುತ್ತವೆ. ಆದರೆ ಕಾರ್ಮಿಕರ ಸ್ಥಿತಿಗತಿಗಳು, ಅವರ ಕೆಲಸದ ಭದ್ರತೆ, ಅವರ ನೈಪುಣ್ಯ ಎಲ್ಲವೂ ಕೂಡಾ ಈ ಸಂದರ್ಭದಲ್ಲಿ ಹೇಗೆ ಅಪಾಯದ ಸವಾಲನ್ನು ಎದುರಿಸಬಲ್ಲವು ಎಂಬ ಚರ್ಚೆಯನ್ನು ಸರ್ಕಾರ ಗಂಭೀರವಾಗಿ ಪರಿಗಣಿಸುವುದಿಲ್ಲ. ವಿದೇಶೀ ಕರೆನ್ಸಿ, ಲಾಭಾಂಶಗಳ

ಮೇಲೆ ಮಾತ್ರ ಕಣ್ಣಿರುವ ಸರ್ಕಾರಗಳು, ಉತ್ಪಾದಕರು ಈ ವ್ಯವಸ್ಥೆಯಡಿ ಮಹಿಳಾ ಕಾರ್ಮಿಕರು ಮೂಲೆಗುಂಪಾಗಿರುವುದನ್ನು ಗಮನಿಸುವುದೇ ಇಲ್ಲ.

ಕೋಟಾ ವ್ಯವಸ್ಥೆ ಇದ್ದಾಗ ಉತ್ಪಾದನೆಯ ಒತ್ತಡಗಳು ಅಷ್ಟಾಗಿ ಕಾರ್ಮಿಕರ ಮೇಲೆ ಇರುತ್ತಿರಲಿಲ್ಲ. ಈಗ ಜಾಗತೀಕರಣವು ಮುಕ್ತವಾದ ಸ್ಪರ್ಧೆ ಏರ್ಪಡಿಸಿದೆ. ಉತ್ಪಾದನೆಯ ಒತ್ತಡಗಳು ಹೆಚ್ಚಾದ ಹಾಗೆ ಕಾರ್ಮಿಕರ ಮೇಲೆ ಹೊರೆಗಳು ಅಧಿಕವಾಗುತ್ತಿವೆ. ನಿಗದಿಪಡಿಸಿದ ಟಾರ್ಗೆಟ್ ಮುಗಿಸುವುದಕ್ಕೆ 10–12 ಘಂಟೆಗಳ ಕೆಲಸವನ್ನು ಕಾರ್ಮಿಕರು ಮಾಡಬೇಕಾಗುತ್ತದೆ. ಓ.ಟಿ.ಯನ್ನು ಕೂಡಾ ಹೆಚ್ಚುವರಿ ವೇತನವಿಲ್ಲದೇ ಮಾಡುವಂತಹ ಪರಿಸ್ಥಿತಿ ನಿರ್ಮಾಣವಾಗುತ್ತಿದೆ.

ಟ್ರಿಮಿಂಗ್ ಮೆಷಿನ್, ಕಾಲರ್ ಟಾಪ್, ಕಟ್ ಪ್ಯಾಕೇಟ್ ಯಂತ್ರಗಳು 'ಹೆಲ್ಪರ್ಸ್'ನ್ನು ಈಗಾಗಲೇ ನಿರುದ್ಯೋಗಿಗಳನ್ನಾಗಿಸಿವೆ. ಮೊದಲು 20 ಬ್ಯಾಚ್‌ಗೆ 10 ಜನ 'ಹೆಲ್ಪರ್ಸ್' ಕೆಲಸ ಮಾಡುತ್ತಿದ್ದರು. ಈಗ ಸಣ್ಣ–ಪುಟ್ಟ ಕಾರ್ಖಾನೆಗಳು ಹೇಳ ಹೆಸರಿಲ್ಲದಂತೆ ಮುಚ್ಚಿ ಹೋಗುತ್ತಿವೆ. ಕ್ವಾಲಿಟಿ, ಪ್ರೊಡಕ್ಷನ್ – ಇವೆರೆಡರ ಒತ್ತಡಗಳ ಹಿನ್ನೆಲೆಯಲ್ಲಿ ಬಹುಮಂದಿ ಕಾರ್ಮಿಕರು ಕೆಲಸದ ಭದ್ರತೆ ಲಕ್ಷಿಸದೇ ಬೇರೆ ಬೇರೆ ಕಾರ್ಖಾನೆಗಳಿಗೆ ಅಲೆದಾಡುವಂತಾಗುತ್ತಿದೆ.

ಹಳ್ಳಿಯಿಂದ ಪಟ್ಟಣಕ್ಕೆ ಕೆಲಸ ಅರಸಿ ಬರುವ ಬಡ ಹೆಣ್ಣುಮಕ್ಕಳೇ ಇರುವ ಗಾರ್ಮೆಂಟ್ಸ್‌ನಲ್ಲಿ ಹೆಚ್ಚು ಮಂದಿ ಮಹಿಳೆಯರು ವಿಧವೆಯರು, ವಿಚ್ಛೇದಿತರು, ಒಂಟಿ ತಾಯಂದಿರು, ಕುಟುಂಬ ಕಲಹದಲ್ಲಿ ಬಳಲಿರುವವರು ಆಗಿರುತ್ತಾರೆ. ಈ ಕಾರ್ಖಾನೆಗಳಲ್ಲಿ ದುಡಿಯುವ ಬಹುಮಂದಿ ಮಹಿಳೆಯರ ಗಂಡಂದಿರು ತರಕಾರಿ ಮಾರುವುದು, ಕೂಲಿ ಕೆಲಸ, ಕಟ್ಟಡದ ಕೆಲಸ, ಆಟೋ ಓಡಿಸುವ ಕೆಲಸಗಳನ್ನೇ ನೆಚ್ಚಿಕೊಂಡವರಾಗಿರುತ್ತಾರೆ. ಶಾಪಿಂಗ್ ಮಹಲುಗಳು ಗಾರ್ಮೆಂಟ್ಸ್ ಕಾರ್ಖಾನೆಯ ಬಹುಮಂದಿ ಮಹಿಳೆಯರ ಗಂಡಂದಿರನ್ನು ನಿರುದ್ಯೋಗಿಗಳನ್ನಾಗಿಸುತ್ತಿವೆ. ನಿರುದ್ಯೋಗವು ಹಿಂಸೆಗೆ, ಹಿಂಸೆಯು–ಕೌಟುಂಬಿಕ ಕಲಹಗಳಿಗೆ, ಕುಡಿತಕ್ಕೆ ದಾರಿ ಮಾಡುತ್ತಿರುವ ಹಿನ್ನೆಲೆಯಲ್ಲಿ ಕಾರ್ಖಾನೆಯ ಒಳಗೆ, ಹಾಗೆಯೇ ಕುಟುಂಬದ ಒಳಗೆ ಎರೆಡರಲ್ಲೂ ಮಹಿಳಾ ಕಾರ್ಮಿಕರ ಸ್ಥಿತಿ ಶೋಚನೀಯವಾಗುತ್ತಿದೆ. ಸಂಬಳದದಿನ ಅವರವರ ಗಂಡಂದಿರು ಗಾರ್ಮೆಂಟ್ಸ್ ಕಾರ್ಖಾನೆಯ ಬಳಿ ಸಾಲುಗಟ್ಟಿ ನಿಂತಿರುತ್ತಾರೆ, ಅವಳ ದುಡಿಮೆಯ ಫಲ ಕಿತ್ತುಕೊಳ್ಳಲು. ಕನಿಷ್ಠ ವೇತನವನ್ನೂ ಪಡೆಯದೇ, 16–20 ವರ್ಷ ದುಡಿದರೂ ಪಿ.ಎಫ್., ಇ.ಎಸ್.ಐ. ಕಳೆದು 3000/– ರೂ ತೆಗೆದುಕೊಳ್ಳುವ ಮಹಿಳಾ ಕಾರ್ಮಿಕರು ಬೆಂಗಳೂರಂತಹ ನಗರದಲ್ಲಿ ಜೀವನ ಹೇಗೆ ಸಾಗಿಸಬಹುದು ಎಂಬುದನ್ನು ಊಹಿಸಲೂ ಕಷ್ಟವಾಗುತ್ತದೆ. ಜಾಗತೀಕರಣದ ಸ್ಪರ್ಧೆಯಲ್ಲಿ ಗ್ಲೋಬಲ್ ಮಾರ್ಕೆಟ್‌ನ ಸ್ಟ್ಯಾಂಡರ್ಡ್ಸ್ ಉಳಿಸಿಕೊಳ್ಳಲು ಹೋರಾಡುವ ಬಂಡವಾಳಶಾಹಿಗಳು ಕಡಿಮೆ ಶ್ರಮದ ಕೂಲಿಯಲ್ಲಿ ಅಧಿಕ ಟಾರ್ಗೆಟ್ಸ್‌ನ ಗುರಿ ಮುಟ್ಟುವುದಕ್ಕೆ ಮಹಿಳಾ ಕಾರ್ಮಿಕರನ್ನೇ ನೆಚ್ಚಿಕೊಂಡಿದ್ದಾರೆ. ಆದರೆ ಕಾರ್ಮಿಕರ **ಬದುಕಿನ ಸ್ಟ್ಯಾಂಡರ್ಡ್** ಟಾರ್ಗೆಟ್ ರೀಚ್ ಆಗುವಂತಹ ಮಾನವೀಯ ಕಾಳಜಿಯ ಮುಖವುಳ್ಳ ಬದಲಾವಣೆ, ಪ್ರಗತಿ ನಮಗಿಂದು ಮುಖ್ಯವಾಗಿದೆ. ಈ ನಿಟ್ಟಿನತ್ತ ಸರ್ಕಾರಗಳು, ಬಂಡವಾಳಶಾಹಿಗಳು ಯೋಚಿಸಬೇಕಾಗಿದೆ. ಕಾರ್ಮಿಕ ಹೋರಾಟಗಳು ಇನ್ನೂ ಹೆಚ್ಚು ಹೆಚ್ಚು ಬಲಗೊಂಡು ಚಳವಳಿಯಾಗಿ ರೂಪುಗೊಳ್ಳುವುದು ಅನಿವಾರ್ಯವಾಗುತ್ತಿದೆ.

*　　　*　　　*

ರಾಜ್ಯ ಸರ್ಕಾರವು ಈ ಸಾಲಿನ ರಾಜ್ಯ ಪ್ರಶಸ್ತಿಗೆ ಗಣ್ಯರನ್ನು ಆಯ್ದು ಗೌರವಿಸಿದೆ. ಸಮಸ್ತ ಮಹಿಳಾ ಲೋಕದ ಗೌರವಕ್ಕೆ ಪಾತ್ರರಾಗಿರುವ ಕವಯಿತ್ರಿ, ಸ್ತ್ರೀವಾದಿ ಚಿಂತಕಿ ಡಾ॥ ವಿಜಯಾದಬ್ಬೆ ಅವರಿಗೆ ಈ ಗೌರವ ಸಂದಿದೆ. ಅವರಿಗೆ ಮಾನಸ ಬಳಗದ ಅಭಿನಂದನೆಗಳು. ರಂಗಭೂಮಿ ಕಲಾವಿದೆ ಮಾಲತಿ ಸುಧೀರ್, ಜನಪದ ಕ್ಷೇತ್ರದ ಚೌಡಿಕೆ ಉಚ್ಚಂಗಮ್ಮ ಮತ್ತು ಬೋವಿ ಜಯಮ್ಮ, ಚಲನಚಿತ್ರ ಕ್ಷೇತ್ರದ ಪ್ರಮೀಳಾ ಜೊಷಾಯ್, ನೃತ್ಯಕ್ಷೇತ್ರದ ಗೀತಾಬಾಲಿ, ಸುಗಮ ಸಂಗೀತ ಕ್ಷೇತ್ರದ ಶಾಂತಾ ಆನಂದ, ಕ್ರೀಡಾಕ್ಷೇತ್ರದ ಜೆ.ಜಿ. ಶೋಭಾ ಮತ್ತು ರೇಖಾಟಂಡನ್ ಇವರುಗಳು ಪ್ರಶಸ್ತಿ ಭಾಜನರಾಗಿದ್ದಾರೆ. ಇವರಿಗೆಲ್ಲ ಮಾನಸ ಬಳಗ ಅಭಿನಂದಿಸುತ್ತದೆ.

*　　　*　　　*

ಖ್ಯಾತ ನಾಟಕಕಾರ ಬಿ.ಆರ್. ಅರಿಷಿಣಗೋಡಿ ಅವರ ಶ್ರೀಮತಿ, 'ಕಮತಗಿ ಹುಚ್ಚೇಶ್ವರ ನಾಟಕ ಸಂಘ'ದಲ್ಲಿ ಅಭಿನೇತ್ರಿ, ಮಾಲತಿಶ್ರೀ ಹಿರಿತೆರೆ, ಕಿರುತೆರೆ, ರಂಗಭೂಮಿಯಲ್ಲಿ ಇಂದಿಗೂ ಸೇವೆ ಸಲ್ಲಿಸುತ್ತಿದ್ದಾರೆ. ಇವರು ಎಲ್ಲ ಮಹಿಳೆಯರೇ ಇರುವ 'ಆಶಾಕಿರಣ ಕಲಾಸಂಘ' ಸ್ಥಾಪಿಸಿ, ನಡೆಸಿಕೊಂಡು ಬಂದಿದ್ದಾರೆ. ಸಾಣೇಹಳ್ಳಿಯ 'ಶಿವಕುಮಾರ ಕಲಾಸಂಘ'ವು ಸ್ಥಾಪಿಸಿರುವ ರಂಗಪ್ರಶಸ್ತಿಯನ್ನು ಈ ಸಾಲಿನಲ್ಲಿ ಮಾಲತಿಶ್ರೀ ಅವರಿಗೆ ನೀಡಲಾಗಿದೆ. ರಂಗಕಲಾವಿದೆಗೆ ಮಾನಸದ ಅಭಿನಂದನೆಗಳು.

❑

# ಗಾರ್ಮೆಂಟ್ಸ್ ಕಾರ್ಮಿಕಳ ಹೋರಾಟದ ಬದುಕು

*ನಿರೂಪಣೆ : **ಚಂಪಾವತಿ***

*ಮೂವತ್ತೈದು ವರ್ಷದ ರುಕ್ಮಿಣಿ ಬಟ್ಟೆ ಹೊಲಿಯುವ (ಗಾರ್ಮೆಂಟ್) ಕಾರ್ಖಾನೆಯಲ್ಲಿ 16 ವರುಷದಿಂದ ದುಡಿದ ಹೆಣ್ಣುಮಗಳು. ಮಂಡ್ಯದ ಹಳ್ಳಿಯೊಂದರಿಂದ ಬಂದ ಈಕೆ ಬಾಲ್ಯದಲ್ಲಿ ಕುರಿ ಮೇಯಿಸುವುದರಿಂದ ಹಿಡಿದು ಕೃಷಿಯ ಎಲ್ಲಾ ಕಾಯಕದಲ್ಲೂ ತೊಡಗಿಸಿಕೊಂಡವರು. ಮದುವೆಯಾದಾಗ ಮಂಡ್ಯದಿಂದ ಬೆಂಗಳೂರಿಗೆ ಬಂದು ಜೀವನ ಪಯಣ ಮುಂದುವರಿಸಿದ ಈಕೆ ಕುಟುಂಬದ ನೆರವಿಗೆಂದು ಗಾರ್ಮೆಂಟ್ ಕಾರ್ಖಾನೆಗೆ ಕಾಲಿಟ್ಟವರು. ಗಾರ್ಮೆಂಟ್ ಕಾರ್ಖಾನೆಯ ಕಾರ್ಮಿಕಳಾಗಿ ಹದಿನಾರು ವರುಷ ಏಳು-ಬೀಳುಗಳನ್ನು ಕಂಡವರು, ಇಂದು 'ಗಾರ್ಮೆಂಟ್ ಆ್ಯಂಡ್ ಟೆಕ್ಸ್‌ಟೈಲ್ಸ್ ವರ್ಕರ್ಸ್ ಯೂನಿಯನ್'ನಲ್ಲಿ ಜನರಲ್ ಸೆಕ್ರೆಟರಿಯಾಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಕಾರ್ಮಿಕಳಾಗಿ ಬಂದ ಇವರು ಕಾರ್ಖಾನೆಯೊಳಗೆ ಕಂಡದ್ದೇನು? ಅನುಭವಿಸಿದ್ದೇನು? ಕಾರ್ಮಿಕ ಸಂಘಟನೆಯ ಹೋರಾಟಗಾರ್ತಿಯಾಗಿ ರೂಪುಗೊಂಡದ್ದು ಹೇಗೆ? ಕಾರ್ಮಿಕ ಸಂಘಟನೆಯಲ್ಲಿ ಅವರ ಅನುಭವ, ಸಂಘಟನೆಯ ಬಗ್ಗೆ ಅವರ ದೃಷ್ಟಿಕೋನ, ಕನಸು ಎಲ್ಲವನ್ನೂ 'ಮಾನಸ'ದೊಂದಿಗೆ ಸವಿಸ್ತಾರವಾಗಿ ಹಂಚಿಕೊಂಡಿದ್ದಾರೆ. ಅವರ ಎದೆಯೊಳಗಿನ ಮಾತು, ಕನಸು, ದೃಷ್ಟಿಕೋನಗಳನ್ನು (ಎರಡು ಕಂತುಗಳಲ್ಲಿ) ಅವರ ಮಾತುಗಳಲ್ಲಿಯೇ ಇಲ್ಲಿ ದಾಖಲಿಸಲಾಗಿದೆ.*




### ಭಾಗ-1

## ಕುರಿ ಕಾಯುವ ಬಾಲ್ಯದಲ್ಲಿ

ನಾನು ಹುಟ್ಟಿದ್ದು ಮಂಡ್ಯ ಜಿಲ್ಲೆಯಲ್ಲಿ. ಮಂಡ್ಯದಲ್ಲಿ ಗಂಡುಮಕ್ಕಳಿಗೆ ಕೊಡುವಷ್ಟು ಬೆಲೇನ ಹೆಣ್ಣುಮಕ್ಕಳಿಗೆ ಕೊಡೋಲ್ಲ. ಈಗ ಸ್ವಲ್ಪ ಬದಲಾವಣೆ ಆಗ್ತಾ ಇದೆ. ನಾವು ಚಿಕ್ಕವರಿರುವಾಗ ಹೆಣ್ಣುಮಕ್ಕಳಿಗೆ ವಿದ್ಯಾಭ್ಯಾಸ ಮುಖ್ಯ ಅಂತ ಭಾವಿಸಿಯೇ ಇರಲಿಲ್ಲ. ರೈತನಿಗೆ ಕೊಟ್ಟು ಮದ್ವೆ ಮಾಡಿದರೆ ಎಲ್ಲಾ ಕೆಲ್ಸ ಮಾಡಿಕೊಂಡು ಹೋಗ್ತಾರೆ ಅನ್ನೋ ಭಾವನೆ ಇತ್ತು. ಮಂಡ್ಯ ಜಿಲ್ಲೆಯ ನಾಗಮಂಗಲ ತಾಲೂಕಿನಲ್ಲಿ ವಡೇರಪುರ ಅಂತ ಗ್ರಾಮ. ನನ್‌ತಂದೆ ಹೆಸರು ಪುಟ್ಟಸ್ವಾಮೇಗೌಡ ಅಂತ. ನಾವು ನಾಲ್ಕುಜನ ಮಕ್ಕಳು. ನಮ್‌ತಂದೆ ತುಂಬಾ ಕುಡೀತಾ ಇದ್ರು. ನಾವು ಇಬ್ಬರು ಹೆಣ್‌ಮಕ್ಕಳು, ಇಬ್ಬರು ಗಂಡುಮಕ್ಕಳು. ನನ್ನ ಅಕ್ಕ ಹ್ಯಾಂಡಿಕ್ಯಾಪ್ಡ್, ಎರೆಡು ವರ್ಷಕ್ಕೆ ಅವಳಿಗೆ ಪೋಲಿಯೋ ಆಗಿ ಸರಿಯಾಗಿ ನಡೆಯೋಕೆ ಕೂಡಾ ಆಗಲ್ಲ. ಆಕೆಗೆ ಮದ್ವೇನೂ ಆಗಿಲ್ಲ. ಅವಳಿಗೆ ಓದಿಸಿದ್ರು, ಗಂಡು ಮಕ್ಕಳಿಗೂ ಓದಿಸಿದ್ರು, ಅಣ್ಣ ಎಸ್.ಎಸ್.ಎಲ್.ಸಿ. ನಲ್ಲಿ ಎರೆಡು ವಿಷಯದಲ್ಲಿ ಫೇಲಾದ. ನಂತರ ಹೇಗೋ ಕಷ್ಟಪಟ್ಟು ಪಾಸು ಮಾಡಿಕೊಂಡ ತಮ್ಮನನ್ನು ಓದಿಸಿದರು. ಅದ್ರೆ ನಾನು ಚೆನ್ನಾಗಿ ಇದ್ದೆನಲ್ಲ, ಕೈ-ಕಾಲು ಗಟ್ಟಿ ಮುಟ್ಟಾಗಿತ್ತು. ಅದಕ್ಕೆ ಸ್ಕೂಲಿಗೆ ಕಳಿಸಲಿಲ್ಲ. ನನ್ಗೆ ಓದೋದು ಅಂದ್ರೆ ತುಂಬಾ ಆಸೆ. ನಮ್ಮೂರಿನಲ್ಲಿ ಒಂದೇ ಒಂದು ಚಿಕ್ಕ ಟಿ.ವಿ. ಇತ್ತು, Black and White. ನ್ಯೂಸ್ ನೋಡೋದು ಅಂದ್ರೆ ನನ್ಗೆ ತುಂಬಾ ಇಷ್ಟ. ಬೆಂಗಳೂರು, ಡೆಲ್ಲಿ ಅಂದ್ರೆ ನಮ್ಗೆ ಕೈಗೆ ಎಟುಕದೇ ಇರೋದು ಅಂತ. ನ್ಯೂಸ್‌ನಲ್ಲಿ ಬೆಂಗಳೂರು ವಿಷಯ ಬರುತ್ತೆ, ಡೆಲ್ಲಿ ವಿಷಯ ಬರುತ್ತೆ. ಇಂದಿರಾಗಾಂಧಿ ಸತ್ತಾಗ ಅವರನ್ನು ಟಿ.ವಿ.ನಲ್ಲಿ ತೋರಿಸ್ತಾ ಇದ್ರೆ - ಹತ್ತು ವರುಷದ ನನ್ಗೆ ಅವಳ ತರಾನೇ ನಾನೂ ಹೋರಾಟ ಮಾಡ್ಬೇಕು ಅನ್ನೋ ಭಾವನೆ ಬರ್ತಾ ಇತ್ತು. ರೇಡಿಯೋನಲ್ಲಿ ನಾನು ಬಹಳ ನ್ಯೂಸ್ ಕೇಳ್ತಾ ಇದ್ದೆ.

ನಮ್ಮಮ್ಮ ಬೆಳಿಗ್ಗೆ ನಾಲ್ಕು ಘಂಟೆಗೇ ನನ್ನನ್ನು ಎಬ್ಬಿಸ್ತಾ ಇದ್ರು. ಹಳ್ಳಿಗಳಲ್ಲಿ ಹಂಚಿಕಡ್ಡಿ ಕೊಯ್ಯೋಕೆ ಹೋಗಬೇಕು. ಯಾರು ಜಾಸ್ತಿ ಕೊಯ್ಯುತ್ತಾರೆ. ಯಾರು ಜಾಸ್ತಿ ಮಾರ್ತಾರೆ ಅಂತ ಕಾಂಪಿಟೇಷನ್. ನಾನೂ ಕೂಡಾ ಹೋಗ್ತಾ ಇದ್ದೆ. ಬಟ್ಟೆ ಮೇಲೆ ಕಟ್‌ಕೊಂಡು ಹಂಚಿಕಡ್ಡಿ ಕೊಯ್ಕೊಂಡು ಬರ್ತಾ ಇದ್ದೆ. ಅಲ್ಲಿಂದ ಬಂದು ದನ, ಎಮ್ಮೆ ಕಲಗಚ್ಚಿಗೆ ಸೊಪ್ಪು ಕೊಯ್ಯಬೇಕಿತ್ತು. ಆನಂತರ ಹುಲ್ಲು ತರಬೇಕಿತ್ತು. ಅಷ್ಟೊತ್ತಿಗೆ 10.30. ಅಡಿಗೆ ಆಗಿದೆ ಅಂದ್ರೆ ಮುದ್ದೆ ತಿನ್ನೋದು. ಆವಾಗೆಲ್ಲ ಯಾವಾಗ್ಲೂ ಮುದ್ದೇನೇ. ಹಬ್ಬ ಬಂದ್ರೆ ಮಾತ್ರ ಅನ್ನ ಮಾಡೋರು. ಹಬ್ಬ ಅಂದ್ರೆ ಖುಷಿ. ಅನ್ನ ತಿನ್ನಬಹುದಲ್ಲ ಎಂದು. ಅಷ್ಟೊಂದು ಕಷ್ಟ, ಅಷ್ಟೊಂದು ಬಡತನ. ನನ್ನ ತಾಯಿ ತುಂಬಾ ಕಷ್ಟ ಪಡ್ತಾ ಇದ್ರು. ನಮ್ ತಂದೆ ಬೆಳಿಗ್ಗೆ ಹೋದ್ರೆ ಸಂಜೆ ಕುಡಕೊಂಡು ಬರೋರು. ಮಕ್ಕಳನ್ನು ನೋಡೋ ಹಾಗೇ ಇಲ್ಲ. ನನ್ನ ತಾಯಿಗೆ ಎಲ್ಲರನ್ನೂ ಓದಿಸಬೇಕು ಅಂತ ಆಸೆ. ಆದರೆ ಏನು ಮಾಡೋದು? ಎಲ್ಲಾ ಕೆಲ್ಸದ ಹೊರೆ ಅವರ ಮೇಲೇ ಬೀಳ್ತಾ ಇತ್ತು. ದನ, ಕೋಳಿ, ಕುರಿ, ಸ್ವಲ್ಪ ಜಮೀನು ಇದೆಲ್ಲ ಅವರೊಬ್ಬರೇ ನಿಭಾಯಿಸಬೇಕಿತ್ತು. ಕೂಲಿ ಕೊಟ್ಟು ಜಮೀನು ಮಾಡಿಸೋರು. ನಮ್ಮಪ್ಪ ಸರಿಯಾಗಿ ಕೆಲ್ಸ ಮಾಡ್ತಾ ಇರಲಿಲ್ಲ. ಕುರಿ ಮೇಯ್ಸೋದು ನನ್ ಕೆಲಸಾನೇ.

ಕುರಿ ಮೇಯಿಸೋ ಬಯಲಲ್ಲಿ ನಾನು ಮಂತ್ರಿ, ನೀನು ಮಂತ್ರಿ ಅಂತ ಆಟ ಆಡ್ತಿದ್ದೆವು. ಸ್ಕಿಪಿಂಗ್ ಆಡೋದು, ಜಗಳ ಆಡೋದು. ಯಾರಾದ್ರು ಏನಾದ್ರು ಅಂದ್ರೆ, ನಮ್ ಜಮೀನ್ ತಾವ ಯಾರಾದ್ರು ಕುರಿ ಮೇಯಿಸಿದ್ರೆ ಜಗಳ ಆಡೋದು, ಹೊಡೆಯೋದು. ಹೊಡೀದೇ ಬಿಡ್ತಾನೇ ಇರಲಿಲ್ಲ. ನಮ್ಮ ಅಮ್ಮನ ಹತ್ರ ಎಲ್ಲಾ ಕಂಪ್ಲೇನ್ಸ್ ಹೇಳೋರು. ಹೀಗೇ ಒಂಥರಾ ಸಿಟ್ಟು, ರೋಷ. ನನ್ಗೆ ಓದೋದು ಅಂದ್ರೆ ಇಷ್ಟ. ಮೂರು ಘಂಟೆ ಹೊತ್ತಿಗೆ ಕುರಿಗಳನ್ನು ಊರಬಾಗಲಲ್ಲಿ ಬಿಟ್ಟು, ನಂತರ ಸ್ಕೂಲಿಗೆ ಹೋಗಿ ಪಾಠ ಕೇಳ್‌ತಿದ್ದೆ. ನಾನು ಒಂದನೇ ಕ್ಲಾಸಿಗೆ 3 ತಿಂಗಳು ಮಾತ್ರ ಹೋಗಿರೋದು. ಹೀಗೇ ಬೆಳೆದುಕೊಂಡು ಬಂದೆ.

12 ವರ್ಷಕ್ಕೆ ನಾನು Mature ಆದೆ. ಆಷಾಢದ ವೇಳೆ ಜಡಿಮಳೆ. ಹಾಗಾಗಿ ನಾನೇ ಕೆಲ್ಸಕ್ಕೆ ಹೋಗಬೇಕಾಗಿತ್ತು. ಋತುಮತಿಯಾದ ಮೇಲೆ ಹೊರೆ ಕಳಚಿಕೊಂಡು ಬಿಡಬೇಕು ಅಂತ ನನ್ನ ಮದ್ವೆ ಮಾಡೋಕೆ ಮಾತು-ಕತೆ ನಡೀತಾ ಇತ್ತು. ಮದ್ವೆ ಅಂದ್ರೆ ಏನು ಅಂತಾನೇ ನನ್ಗೆ ಗೊತ್ತಿರಲಿಲ್ಲ. 16ನೆಯ ವಯಸ್ಸಿನಲ್ಲಿ ಮದ್ವೆ ಮಾಡಲೇಬೇಕು ಅಂತ ನೆಲ್ಲಿಗೆರೆನಲ್ಲಿದ್ದ 25 ಕುಂಟೆ ಜಮೀನು ಮಾರಿದ್ರು. ಒಬ್ಬ ಗಂಡಿನೋರು ಬಂದ್ರು, ಇನ್ನು ಹದಿನೈದು ದಿನದಲ್ಲಿ ಮದ್ವೆ ಲಗ್ನ ಇದೆ, ಅಷ್ಟರಲ್ಲಿ ಮದ್ವೆ ಮಾಡಿಕೊಟ್ಟು ಬಿಡಬೇಕು 'ಅಂದ್ರು.' 'ನಮ್ ದೊಡ್ಡ ಹುಡುಗ ಮಿಲಿಟರಿನಲ್ಲಿ ಇದಾನೆ. ಅವನು ಹೊರಡೋ ಅಷ್ಟರಲ್ಲಿ ಮದ್ವೆ ಮಾಡಿಬಿಡಬೇಕು' ಅಂದ್ರು. ಮದ್ವೆ ಫಿಕ್ಸ್ ಆಯ್ತು. ಮದ್ವೆ ಅಂದ್ರೇನೇ ಏನು ಅಂತ ಗೊತ್ತಿಲ್ಲದೇ ಇರೋ ನಾನು ಕುರಿ ಮೇಯಿಸಿಕೊಂಡು, ಕೆಲ್ಸ ಮಾಡಿಕೊಂಡು, ಆಟ ಆಡಿಕೊಂಡಿದ್ದೆ. ಮದ್ವೆ ಇನ್ನು ಮೂರು ದಿನ ಇದೆ ಎನ್ನುವಾಗ ಆ ಹುಡುಗನಿಗೆ ಬೇರೆ ಮದ್ವೆ ಆಗಿಬಿಟ್ಟಿದೆ ಅಂತ ಗೊತ್ತಾಯ್ತು. ನನ್ಗೆ ಏನೂ ಅನ್ನಿಸಲೇ ಇಲ್ಲ. 'ಅಕ್ಕನ ಮಗಳ್ನ ಮೋಸದಿಂದ ಮದ್ವೆ ಮಾಡಿದ್ರು, ಆಕೆ ಪೆದ್ದಿ. ನಾನು ಈಗ ಮಾತು-ಕತೆ ಆಗಿರೋ ಹುಡುಗೀನೇ ಮದ್ವೆ ಆಗ್ತೀನಿ' ಅಂತ ಆ ಹುಡುಗ ಹೇಳಿದ್ನಂತೆ. ನಮ್ಮ ಅಣ್ಣ ಬೇಡ್ವೇ ಬೇಡ ಅಂತ ಹೇಳಿದ್ರು. ಮದ್ವೆ ನಿಲ್ಲೋದು ಹೇಗೆ? ನಮ್ಮಮ್ಮನ ಸೋದರತ್ತೆ ಮಗಳ ಮಗನ್ನ ಕೇಳಿದ್ರು, ಅವ್ರು ಒಪ್ಪಿಕೊಂಡ್ರು. ಅದೇ ಮುಹೂರ್ತಕ್ಕೆ ಸೋದರತ್ತೆ ಮಗನ ಜೊತೆ 1989ರಲ್ಲಿ ಮದ್ವೆ ಆಯ್ತು. ನನ್ನ 16-17 ವರ್ಷಕ್ಕೆ ಮದ್ವೆ ಆಯ್ತು. 20 ವರ್ಷಕ್ಕೆ ಎರಡು ಮಕ್ಕಳೂ ಆಗಿ ಆಪರೇಷನ್ನೂ ಕೂಡಾ ಆಯ್ತು.

### ಭಾಗ - ೨
### ತಹತಹಿಸುವ ಕಾರ್ಮಿಕಳಾಗಿ

1991ರಲ್ಲಿ ನಾನು ಗಾರ್ಮೆಂಟ್ಸ್ ಸೇರಿದ್ದು. ನಮ್ ಯಜಮಾನ್ರಿಗೆ 400 ರೂಪಾಯಿ ಸಂಬಳ ಇತ್ತು. ಕುಟುಂಬ ನಿರ್ವಹಿಸೋದು ಕಷ್ಟ ಅಂತ ನಾನು ಗಾರ್ಮೆಂಟ್ಸ್ ಸೇರಿಕೊಂಡೆ. ಆವಾಗ ಗಾರ್ಮೆಂಟ್ಸ್‌ನಲ್ಲಿ 750/- ರೂಪಾಯಿನೇ ಹೆಚ್ಚು ಸಂಬಳವಾಗಿತ್ತು. ನಮ್ ಹಳ್ಳಿನಲ್ಲಿ ಅಂಗನವಾಡಿನಲ್ಲಿ ಟೈಲರಿಂಗ್ ಹೇಳಿಕೊಡ್ತಾ ಇದ್ರು, ಸರ್ಕಾರದಿಂದ ಮಿಷನ್ ಕೊಟ್ಟಿದ್ರು. ನಾನು ಬಾಣಂತಿನಲ್ಲಿ ಹಳ್ಳೀಲಿದ್ದಾಗ ಮಿಷನ್ ಯಾರೂ ತುಳೀತಾನೇ ಇರಲಿಲ್ಲ. ಮಧ್ಯಾಹ್ನದ ಹೊತ್ತು ಬಿಡುವು ಇರ್‍ತಾ ಇತ್ತಲ್ಲ. ಆಗ ಮಗೂನ ಕರ್‍ಕೊಂಡು ಹೋಗಿ ಅಲ್ಲಿಯೇ ಮಲಗಿಸಿಕೊಂಡು ವೇಸ್ಟ್ ಬಟ್ಟೆ ಹೊಲೀತಾ ಹೊಲೀತಾ ಸ್ಟಿಚ್ ಹಾಕೋದು ಕಲಿತುಕೊಂಡಿದ್ದೆ. ಬೆಂಗಳೂರಿಗೆ ಬಂದಾಗ ಗಾರ್ಮೆಂಟ್ಸ್‌ನಲ್ಲಿ ಕೆಲ್ಸ ಸಿಗುತ್ತೆ ಅಂದ್ರು. ಟಿಂಬರ್‌ಯಾರ್ಡ್ ಲೇಔಟ್‌ನಲ್ಲಿ ಒಂದು ಫ್ಯಾಕ್ಟರಿ ಇತ್ತು. ಅಲ್ಲಿ ತುಂಬಾ ಮಿಷನ್ಸ್ ಇತ್ತು. 'ಟೈಲರ್ ಕೆಲ್ಸ ಮಾಡ್ತೀನಿ' ಅಂದೆ. ವೇಸ್ಟ್ ಬಟ್ಟೆಗೆಲ್ಲಾ ಸ್ಟಿಚ್ ಹಾಕು ಅಂದ್ರು. ಪವರ್ ಮಿಷನ್‌ನಲ್ಲಿ ಕೆಲ್ಸ ಮಾಡೋದು ನನ್ಗೆ ಗೊತ್ತೇ ಇರಲಿಲ್ಲ. ಅಲ್ಲೊಂದು ಖಾಲಿ ಮಿಷನ್ ಇತ್ತು. ಅಲ್ಲಿ ಕೂತುಕೊಂಡ್ರೆ ಅವರು ಮಿಷನ್‌ನಿಂದ ದಾರ ಎಲ್ಲಾ ತೆಗೆದುಬಿಡ್ತಾರೆ, ಇವರಿಗೆ ದಾರ ಹಾಕೋಕೆ ಬರುತ್ತೋ ಇಲ್ವೋ ಅಂತ ಪರೀಕ್ಷೆ ಮಾಡೋಕಂತೆ! ಪಕ್ಕದವರನ್ನೆಲ್ಲ ಕೇಳಿಕೊಂಡು ದಾರ ಹಾಕಿದೆ. ವೇಸ್ಟ್ ಬಟ್ಟೆಗೆಲ್ಲ ಸ್ಟಿಚ್ ಹಾಕಿದೆ. 15ನೇ ತಾರೀಖಿನಿಂದ ಹೋಗಿದ್ದು. ಹದಿನೈದು ದಿನ ಕೆಲ್ಸ ಮಾಡಿದೆ. ನನ್ನ attendance ಇರಲೇ ಇಲ್ಲ. ಹದಿನೈದು ದಿನದ್ದು ಸಂಬಳ ಕೊಡಬೇಕಾಗಿತ್ತು. ನನ್ನ ಹೆಸರೇ ಇಲ್ಲ ಅಂದ್ರು. ನನ್ಗೇನೂ ಬೇಜಾರಾಗಲಿಲ್ಲ. ಕೆಲ್ಸ ಕಲ್‌ತಿದ್ನಲ್ಲ. ಬೇರೆ ಫ್ಯಾಕ್ಟರಿಗೆ ಹೋದೆ. ಅಲ್ಲಿ ಕೆಲ್ಸ ಕೊಟ್ರು. 750 ರೂಪಾಯಿ ಸಂಬಳ ಹಾಕಿದ್ರು. ಅದು ಆವಾಗ ಹೆಚ್ಚಿನ ಸಂಬಳ. ಬೇರೆಯವರಿಗೆಲ್ಲ ಹೊಟ್ಟೇಕಿಚ್ಚು, ಹೊಸಬಳಿಗೆ ಇಷ್ಟೊಂದು ಸಂಬಳ ಕೊಡ್ತಾರಲ್ಲ ಅಂತ. ಕಾಲರ್ ಫಿನಿಶಿಂಗ್ ಕೊಡಿ, ಕಾಲರ್ ಅಟ್ಯಾಚ್ ಕೊಡಿ ಮಾಡ್ತಾಳಾ? ಅಂತ ಗಲಾಟೆ ಮಾಡೋವ್ರು. ಅವರು ಏನು ಕೆಲ್ಸ ಹೇಳಿದ್ರೂ ಮಾಡ್ತಾ ಇದ್ದೆ. ಹೀಗೆ ಮಾಡ್ತಾ ಮಾಡ್ತಾ ಕೆಲ್ಸ ಕಲಿತುಕೊಂಡೆ. ಆವಾಗ ಹೆಣ್ಣುಮಕ್ಕಳಿಗೆ ಗೌರವ ಇತ್ತು. ಕೆಲ್ಸ ಮಾಡೋಕೆ ಬಿಡೋವ್ರು.

ಅನಂತರ ಆ ಫ್ಯಾಕ್ಟರಿ ಬಿಟ್ಟು ಬೇರೆ ಫ್ಯಾಕ್ಟರಿ ಸೇರಿಕೊಂಡೆ. ಗಾರ್ಮೆಂಟ್ಸ್‌ನಲ್ಲಿ ಹೇಗೆ ಅಂದ್ರೆ ಎಲ್ಲಿ ಸಂಬಳ ಜಾಸ್ತಿ ಕೊಡ್ತಾರೋ ಅಲ್ಲಿ ಹೋಗಿ ಸೇರಿಕೊಳ್ತಾರೆ. ನಾನೂ ಕೂಡಾ ಅಲಂಕಾರ್ Export, ಶಿವಾನಂದ ಹೀಗೆ ಅನೇಕ ಕಾರ್ಖಾನೆನಲ್ಲಿ ಕೆಲ್ಸ ಮಾಡಿದೀನಿ. ಆದರೆ ಎಲ್ಲೂ ಸರ್ವೀಸ್ ಮಾಡಲಿಲ್ಲ. ಎರಡು ವರ್ಷ ಅಲ್ಲಿ-ಇಲ್ಲಿ ಕೆಲ್ಸ ಮಾಡಿದೆ. ನಂತರ ಶಾಲಿನಿ ಕ್ರಿಯೇಷನ್ಸ್‌ನಲ್ಲಿ ಕೆಲ್ಸಕ್ಕೆ ಸೇರಿಕೊಂಡೆ. ಅಲ್ಲಿ ಒಂದೂವರೆ ವರ್ಷ ಕೆಲಸ ಮಾಡಿದೆ. ನನ್ನ ಮಗಳಿಗೆ ಹುಷಾರಿಲ್ಲ ಅಂತ ಒಂದು ದಿನ ರಜ ಹಾಕಿದ್ದಕ್ಕೆ 'ಫ್ಯಾಕ್ಟರಿ ಗೇಟ್ ತೆಗೆದಿದೆ, ಹೋಗಮ್ಮ' ಅಂದ್ರು. 'ನನ್ಗೂ ಗೊತ್ತು ಗೇಟ್ ತೆರೆದಿದೆ' ಅಂತ ಹೇಳಿ ಅಲ್ಲಿಂದ ಬಂದೆ.



*ಆಗಸ್ಟ್ 2008ರಲ್ಲಿ ಬಂದ್ ಕರೆ ಇತ್ತು. ಆವತ್ತು 8-10 ಸಾವಿರ ಫ್ಯಾಕ್ಟರಿ ಕಾರ್ಮಿಕರು ಕಾರ್ಖಾನೆ ಮುಚ್ಚಿಸಿ ಈಚೆ ಬಂದಿದ್ದರು. C.I. T.U, A.I T.U.C ನವ್ರು ಮಾಡ್ತಾರಲ್ಲ, ನಾವೂ ಒಟ್ಟಿಗೆ ಹೋರಾಡೋಣ ಅಂತ 25 ಜನ ನಾವು ಒಂದು ಫ್ಯಾಕ್ಟರಿಗೆ ಹೋದ್ವಿ. BHEL ನವರನ್ನು ಕೇಳಿದ್ದಕ್ಕೆ 'ನೀವು ಹೆಣ್‌ಮಕ್ಕಳು ಈಚೆ ಬರಲ್ಲ. ಏನೂ ಮಾಡಲ್ಲ' ಅಂದ್ರು ನಾನು ಯೂನಿಯನ್ ಸೆಕ್ರೆಟರಿ ಬಂದಿದೀನಿ. ಯಾಕೆ ಬರಲ್ಲ ಅಂತೀರಾ? ನೀವೆಲ್ಲ ಈಚೆ ಬರಲೇಬೇಕು ಅಂದ್ವಿ. ನಾವೆಲ್ಲ ಬಾವುಟ ಹಿಡಿದುಕೊಂಡು ನಿಂತಿದೀವಿ. ಇವತ್ತು ಮುಷ್ಕರ, ಅದ್ಹೇಗೆ ಕೆಲ್ಸ ಮಾಡಿಸ್ತಾ ಇದೀರ ಅಂತ ಘೋಷಣೆ ಕೂಗಿದ್ವಿ. ಪೊಲೀಸರು ಬಂದ್ರು. ಅವರಿಗೆ ಮುಷ್ಕರ ಇದೆ, ಕಾರ್ಮಿಕರನ್ನ ಬಿಡಿಸಬೇಕು ಅಂದ್ವಿ. 800 ಜನ ಕಾರ್ಮಿಕರು ಈಚೆ ಬಂದ್ರು. ನಂತರದ ಫ್ಯಾಕ್ಟರಿಗಳಲ್ಲಿಯೂ ಕೆಲಸ ಮಾಡ್ತಿದ್ದವರನ್ನ ಈ ಕಾರ್ಮಿಕರೇ ಬಿಡಿಸಿದರು. ಬೆಲೆ ಏರಿಕೆ, ರಾತ್ರಿ ಪಾಳಿ ಬಗ್ಗೆ ಇರುವ ಕಾನೂನುಗಳು ಸರಿಯಾಗಿ ಜಾರಿಗೆ ಬರಬೇಕು ಅಂತ ಕಾರ್ಮಿಕರೇ ಅಕ್ರೋಶದಿಂದ ಹೇಳ್ತಾ ಇದ್ರು. ಗೋಕುಲ್‌ದಾಸ್ ಗಾರ್ಮೆಂಟ್ಸ್ ಸಂಸ್ಥೆಯ 2500 ಕಾರ್ಮಿಕರನ್ನೂ ಬಿಡಿಸಿದರು. ಬಹಳ ದೊಡ್ಡ ಚಳವಳಿಯಾಯ್ತು. ಬಹುಶಃ ವೈಯಕ್ತಿಕ ಸಮಸ್ಯೆ ತೆಗೆದುಕೊಂಡು ಸಂಘಟನೆ ಬೆಳೆಸೋದು ಕಷ್ಟ. ಆದ್ರೆ ಸಾಮಾಜಿಕ ಸಮಸ್ಯೆಗಳಿದ್ದಾಗ ಚಳವಳಿಗಳು ಹುಟ್ಟಿಕೊಳ್ಳುತ್ವೆ. ಆವತ್ತು ಅಷ್ಟು ಯೋಜನೆ ಇಲ್ಲದಿದ್ದರೂ ಕಾರ್ಮಿಕರೇ ಮುನ್ನುಗ್ಗಿ ಮುಷ್ಕರ ಮಾಡಿದ್ದು ವಿಶೇಷ.*

1998ರಲ್ಲಿ ಟೆಕ್ಸ್‌ಪೋರ್ಟ್ ಕ್ರಿಯೇಷನ್ಸ್‌ಗೆ ಸೇರಿಕೊಂಡೆ. ನಾನು ನಿರಂತರವಾಗಿ ಇಲ್ಲಿಯೇ ಕೆಲಸ ಮಾಡಿರೋದು. ಸರ್ವೀಸ್ ಮಾಡಿದ್ರೆ ಲೀವ್ ಇದೆ, ಗ್ರಾಚುಯಿಟಿ ಇದೆ, ಬೋನಸ್ ಕೊಡಬೇಕು ಅನ್ನೋದೇ ನಮ್ಗೆ ಗೊತ್ತಿರಲಿಲ್ಲ. 2003ರಲ್ಲಿ N.G.O ಸಿ.ವಿ.ಡೆಪ್ ಸಂಸ್ಥೆಯವರು ಗಾರ್ಮೆಂಟ್ ವರ್ಕರ್ಸ್‌ಗಾಗಿ ಕೆಲ್ಸ ಮಾಡೋಕೆ ಅಂತ ಬಂದ್ರು. ಫ್ಯಾಕ್ಟರಿ 5-30ಕ್ಕೆ ಮುಗಿದಾಗ ಫ್ಯಾಕ್ಟರಿ ಗೇಟ್ ಹತ್ರ ನನ್ಗೆ ಕರಪತ್ರ ಸಿಕ್ತು. Leagal Education ಪ್ರೋಗ್ರಾಂ ಚಾಮರಾಜಪೇಟೆ ಸ್ಕೂಲಲ್ಲಿ ಇದೆ ಅಂತ ಇತ್ತು. ನಾನು ಸ್ಕೂಲಿಗೆ ಹೋದವಳೇ ಅಲ್ಲ. ಕುರಿ ಮೇಯಿಸೋಕೆ ಹೋದಾಗ ಕದ್ದು-ಕದ್ದು ಸ್ಕೂಲಿಗೆ ಹೋಗ್ತಾ ಇದ್ದೆ ಅಷ್ಟೇ. ಪೇಪರ್ ಓದಿ ಓದಿ ಸ್ವಲ್ಪ ಓದೋಕೆ, ಬರೆಯೋಕೆ ಬರೋದು. ಕರಪತ್ರ ಓದಿದೆ. ಗಾರ್ಮೆಂಟ್ ಕಾರ್ಮಿಕರಿಗೇ ಕಾನೂನುಗಳಿವೆ ಅಂತ ಇತ್ತು. ಇಲ್ಲಿ ಇಷ್ಟೊಂದು ಸಮಸ್ಯೆ ಇದೆ, ಇದಕ್ಕೆಲ್ಲ ಕಾನೂನುಗಳಿವೆಯಾ ಅಂತ ಆಶ್ಚರ್ಯ ಆಯ್ತು. ಹೆಣ್ಣು ಮಕ್ಕಳಿಗೆ ಗೂಬೆ, ಕತ್ತೆ ಅಂತ ಬಯ್ಯೋವ್ರು. ಪೀಸ್ ಎತ್ತಿ ಮುಖದ ಮೇಲೆ ಎಸೆಯೋರು. ತಲೆಯ ಮೇಲೆ ಹೊಡೆಯೋರು. ಕೆಟ್ಟದ್ದಾಗಿ ಬಯ್ಯೋರು. ಇಂತಹದೆಲ್ಲ ಕೇಳಿ ಕೇಳಿ ಹಿಂಸೆ ಆಗ್ತಾ ಇತ್ತು. 'ಯಾಕ್ಹೀಗೆ ಬಯ್ತೀರಾ'? ಅಂದ್ರೆ, 'ನಿನಗೇನೂ ಅಲ್ವಲ್ಲ. ಬಯ್ಸಿಕೊಂಡೋರು ಸುಮ್ನಿದಾರೆ ನಿನಗ್ಯಾಕೆ ಅದೆಲ್ಲ' ಅಂತ ಸೂಪರ್‌ವೈಸರ್ ಹೇಳೋವ್ರು. 'ನೀವು ಯಾಕೆ ಬಯ್ಸಿಕೊಂಡು ಸುಮ್ನೇ ಇದೀರಾ' ಅಂತ ಕಾರ್ಮಿಕರಿಗೆ ಕೇಳಿದ್ರೆ, 'ಕೆಲ್ಸದಿಂದ ಕಳಿಸಿಬಿಡ್ತಾರೆ' ಅನ್ನೋರು. ಇಂತಹ ಸಮಯದಲ್ಲಿ ಕಾರ್ಮಿಕರಿಗೆಂದೇ ಕಾನೂನುಗಳಿವೆ ಅಂತ ತಿಳಿದು ನನ್ಗೆ ತುಂಬಾ ಸಂತೋಷ ಆಯ್ತು. ಆಟೋ ಮಾಡಿಕೊಂಡು ಚಾಮರಾಜಪೇಟೆ ಸ್ಕೂಲಿಗೆ ಹೋದೆ. ಅಲ್ಲಿ ಲೇಬರ್ ಕಮಿಷನರ್, ಮಂಜುನಾಥ ಸಿ.ವಿ.ಡೆಪ್‌ನವ್ರು ಎಲ್ಲಾ ಇದ್ರು. ಲೇಬರ್ ಕಮಿಷನರ್ ಗಾರ್ಮೆಂಟ್ ಕಾರ್ಮಿಕರಿಗೆ ಏನೇನು ಕಾನೂನುಗಳಿವೆ ಅಂತ ಮಾತನಾಡಿದ್ರು. ನನ್ಗೆ ಅಳು ಬಂತು. 'ಇಷ್ಟೊಂದು ಕಾನೂನುಗಳಿವೆ. ನೀವು ಫ್ಯಾಕ್ಟರಿ ಒಳಗಡೆ ಬಂದು ನೋಡ್ತೀರಾ? ನಮಗೆ ಎಷ್ಟು ಹಿಂಸೆ ನಡೀತಾ ಇದೆ. ನೀವು ಬಂದ್ರೂ ಕ್ಯಾಬಿನ್ ಒಳಗಡೆ ಕುಳಿತುಕೊಂಡು ಹೊರಟು ಹೋಗ್ತೀರಾ' ಅಂತ ಗಲಾಟೆ ಮಾಡಿದೆ. ಲೇಬರ್ ಕಮಿಷನರ್‌ಗೆ ಕೋಪ ಬಂತು. 'ನೀವು ಯೂನಿಯನ್ ಮಾಡಿಕೊಳ್ಳಿ' ಅಂತ ಹೇಳಿದ್ರು. ಯೂನಿಯನ್ ಮಾಡಿದ್ರೆ ಫ್ಯಾಕ್ಟರಿ ಮುಚ್ಚಿ ಹೋಗುತ್ತೆ ಅಂತ ಮನಸ್ಸಲ್ಲಿ ಅಂದ್ಕೊಂಡು ವಾಪಸ್ಸು ಬಂದೆ. ಈಗ್ಲೂ ಅವರು 'ಏನ್ ಮೇಡಂ, ಅವತ್ತು ಅಷ್ಟು ಗಲಾಟೆ ಮಾಡಿಬಿಟ್ರಿ' ಅಂತ ಹೇಳ್ತಾ ಇರ್ತಾರೆ.

ಆ ನಂತರ ನಮಗೆ ಟ್ರೈನಿಂಗ್ ಕೊಡೋಕೆ ಪ್ರಾರಂಭಿಸಿದ್ರು. ಮಹಿಳೆಗೆ ಏನೇನು ಹಕ್ಕಿದೆ ಅಂತ ಹೆಚ್.ಎಸ್.ಎಸ್.ನಿಂದ ರೇಖಾ, ಇಂದು ಅವರೆಲ್ಲ ಬಂದು ಟ್ರೈನಿಂಗ್ ಕೊಟ್ಟಿದ್ದಾರೆ. ಹೆಣ್‌ಮಕ್ಕಳು ಹೀಗೆ ಶೋಷಣೆಗೆ ಒಳಗಾಗುತ್ತಾರೆ ಅಂತ ಅವ್ರು ಹೇಳಿದ್ರೆ ನಮ್ಗೆ ಸರಿ ಅನ್ನಿಸ್ತಾ ಇತ್ತು. ಬೇರೆಯವರನ್ನು ಸೇರಿಸಬೇಕು ಅಂದ್ರೆ ಮಕ್ಕಳು ಕಾಯ್ತಾ ಇರ್ತಾರೆ ಅಂತ ಕೆಲ್ಸ ಮುಗಿದ ತಕ್ಷಣ ಕಾರ್ಮಿಕರು ಮನೆಗೆ ಓಡಿ ಹೋಗೋರು. ಅಂತಹ ಸಮಯದಲ್ಲಿ ಸಿ.ವಿ.ಡೆಪ್‌ನವರು ಒಂದು ಒಳ್ಳೇ ಯೋಜನೆ ಹಾಕಿದ್ರು. ಸ್ವ-ಸಹಾಯ ಸಂಘ ಮಾಡಿದ್ರು. 15, 18 ಜನರಿಗೆ ಒಂದೊಂದು ಸಂಘ ಮಾಡಿದರು. ತಿಂಗಳಿಗೆ ಒಂದುಸಲ meeting ಸೇರಿದಾಗ ಕಾರ್ಮಿಕರಿಗೆ ಇರೋ ಕಾನೂನುಗಳ ಬಗ್ಗೆ ಹೇಳೋರು. ಹೀಗೆ ಹೇಳ್ತಾ ಹೇಳ್ತಾ ಆರು ತಿಂಗಳಾದ ಮೇಲೆ ಹೆಣ್‌ಮಕ್ಕಳು ಸಮಸ್ಯೆ ಹೇಳಿಕೊಳ್ಳೋಕೆ ಪ್ರಾರಂಭ ಮಾಡಿದ್ರು. ಮನೆ ಸಮಸ್ಯೆ, ಫ್ಯಾಕ್ಟರಿ ಸಮಸ್ಯೆ ಎಲ್ಲದನ್ನೂ ಬಿಚ್ಚಿ ಮಾತನಾಡೋಕೆ ಪ್ರಾರಂಭ ಮಾಡಿದ್ರು. ನಂತರ ಅವರು ಯಾಕೆ ನೀವೇ ಸಂಘಟನೆ ಮಾಡಿಕೊಳ್ಳಬಾರದು ಅಂತ ನಮ್ ಕಿವಿಗೆ ಹಾಕಿದ್ರು. ಆವಾಗ ನಾವು ಸುಮಾರು 50 ಜನ ಇದ್ವಿ. ಹತ್ತು ಫ್ಯಾಕ್ಟರಿಗಳಿಂದ ಕಾರ್ಮಿಕರು ಇದ್ವಿ. ಮೈಸೂರು ರೋಡ್‌ನಲ್ಲಿ ಸಿದ್ದಾರೂಢ ಆಶ್ರಮ ಇದೆ. ಅಲ್ಲಿ 2004ರಲ್ಲಿ ನವೆಂಬರ್ 1ನೇ ತಾರೀಖು 50 ರೂಪಾಯಿ ಫೀಸ್ ಹಾಕಿಕೊಂಡು ನಮ್ಮ ಸಂಘಟನೆ ಪ್ರಾರಂಭಮಾಡಿ 'ಮುನ್ನಡೆ' ಅಂತ ಹೆಸರಿಟ್ಟು 20 ಜನರನ್ನು ಎಕ್ಸಿಕ್ಯುಟೀವ್ ಸದಸ್ಯರು ಅಂತ ಆಯ್ಕೆ ಮಾಡಿದ್ವಿ. ಮೂರು ಜನ ಸಂಚಾಲಕರನ್ನೂ ಕೂಡಾ ಆಯ್ಕೆ ಮಾಡಿದ್ವಿ. ಅದ್ರಲ್ಲಿ ನಾನೂ ಒಬ್ಬಳಾಗಿದ್ದೆ. ಸಂಘಟನೆ ಮಾಡುವ ಜವಾಬ್ದಾರೀನ ನಾನು ತೆಗೆದು ಕೊಂಡಿದ್ದೆ. ಸಮಸ್ಯೆಗಳು ಜಾಸ್ತಿ ಆಕ್ತಾ ಆಕ್ತಾ ಎಲ್ಲರಿಗೂ ಆಕ್ರೋಶ ಜಾಸ್ತಿ ಆಯ್ತು. ಆವಾಗ ಮಹಿಳಾ ಆಯೋಗದಲ್ಲಿ ಕಾವೇರಿ ಅಂತ ಇದ್ರು. ಅವರಿಗೆ ಒಂದು ರಿಕ್ವೆಸ್ಟ್ ಲೆಟರ್ ಕೊಟ್ವಿ. ಫ್ಯಾಕ್ಟರಿಗೆ ನೀವು ಬರಬೇಕು. ಗಾರ್ಮೆಂಟ್ ಕಾರ್ಮಿಕರ ಜೊತೆ ನೀವು ಮಾತನಾಡಬೇಕು ಅಂತ ಅವರನ್ನು ಕೇಳಿಕೊಂಡ್ವಿ. ಅವರು ಒಂದು ಭಾನುವಾರ ಬಂದ್ರು. ಎಲ್ಲಾ ಹೆಣ್‌ಮಕ್ಕಳೂ ನಮ್ಗೆ ಎಂತೆಂಥಾ ಸಮಸ್ಯೆ ಇದೆ ಅಂತ ಹೇಳಿಕೊಂಡ್ರು. ಆವಾಗ ಅವ್ರು 'ನಾನು ಒಂದು ವಾರದೊಳಗೆ ನಿಮ್ಮ ಫ್ಯಾಕ್ಟರಿಗೆ ಬರ್ತೀನಿ, ಅಲ್ಲೂ ನಿಮ್ಮ

ಸಮಸ್ಯೆ ಹೇಳಿ, ಸರಿ ಮಾಡ್ತೀನಿ' ಅಂದ್ರು, ಹೇಳಿದ ಹಾಗೆ ಅವ್ರು ಬಂದ್ರು, ಆಗ ಕಾರ್ಮಿಕರೆಲ್ಲ ಮುಖ ಮುಖ ನೋಡಿಕೊಂಡ್ರು. ಸೂಪರ್‌ವೈಸರ್ ಹಾಗೂ ಫೀಡಿಂಗ್ ಹೆಲ್ಪರ್ಸ್‌ನ ಆಚೆ ಕಳ್ಸಿದ್ರೆ ಎಲ್ಲಾ ಮಾತನಾಡ್ತಾರೆ ಅಂತ ನಾವು ನಾಲ್ಕುಜನ ಹೋಗಿ ಕಾವೇರಿಯವರ ಹತ್ರ ಹೇಳಿದ್ವಿ, ಅವರನ್ನೆಲ್ಲ ಆಚೆ ಕಳಿಸಿದ್ರು. Production Manager ಹಾಗೂ ಇತರರನ್ನು ಒಂದು ಕೋಣೆಯಲ್ಲಿ ಕೂಡಿ ಹಾಕಿದ್ರು, ಆವಾಗ ಎಲ್ಲಾ ಕಾರ್ಮಿಕರೂ ಮಾತನಾಡಿದ್ರು, ಅಲ್ಲಿರೋ ಎಲ್ಲಾ ಸಮಸ್ಯೆಗಳನ್ನು ಹೇಳಿದ್ರು. ಡೆಪ್ಯೂಟಿ ಕಮಿಷನರ್ ನಂಜುಂಡಪ್ಪ ಅಂತ. ಅವರನ್ನು ಕರೆದುಕೊಂಡು ಬಂದಿದ್ರು. ನಮ್ ಸಮಸ್ಯೆ ಕೇಳಿ ಅವ್ರಿಗೆ ಬೇಜಾರಾಗಿತ್ತು. ಒಂದು ತಿಂಗಳು ಟೈಮ್ ಕೊಡಿ, ಆಮೇಲೆ ನಾವೇನಾದ್ರು ಕ್ರಮ ತೆಗೆದುಕೊಳ್ತೀವಿ ಅಂದ್ರು, ಮ್ಯಾನೇಜ್‌ಮೆಂಟ್ ಕರೆಸಿ ಮಾತನಾಡಿದ್ರು.

ಆ ಫ್ಯಾಕ್ಟರಿನಲ್ಲಿರೋ P.M. ತುಂಬಾ ಭ್ರಷ್ಟ ಇದ್ದ. ಚೆನ್ನಾಗಿ ಇರೋ ಹೆಣ್‌ಮಕ್ಕಳಿಗೆ O.T. ಹಾಕೋದು, ಅವರು ಒಪ್ಪದೇ ಇದ್ರೆ ಹಿಂಸೆ ಕೊಡೋದು, ಬೇರೆ ಬೇರೆ ಕೆಲಸಕ್ಕೆ ಹಾಕೋದು, ಹೀಗೆ ಮಾಡ್ತಾ ಇದ್ದ. ಅಲ್ಲಿಯ ಹೆಣ್‌ಮಕ್ಕಳು ಹೇಳಿಕೊಳ್ತಾ ಇರಲಿಲ್ಲ. ಹೀಗೇ ಒಂದು ಸಲ Redhand ನಲ್ಲಿ ಸಿಕ್ಕಿ ಹಾಕಿಕೊಂಡು, ಸಮಸ್ಯೆ ಆಯ್ತು. ಆಗ ಮ್ಯಾನೇಜ್‌ಮೆಂಟ್‌ನವರು 3 ತಿಂಗಳು ಸಮಯ ಕೊಟ್ಟು ಆಚೆ ಕಳಿಸಿದ್ರು, ಆ ದಿನ ಅವನು ಹೋಕ್ತಾನೆ ಅಂತ ಗೊತ್ತಿತ್ತು. ಬಂದು ನನ್ನ ಹತ್ತಿರ ನಿಂತುಕೊಂಡು 'ನೋಡೋಣ, ಎಷ್ಟು ದಿನ ಇರುತ್ತೆ ಇದು' ಅಂದು ಹೋದ. ನಾನೇನೂ ಮಾತನಾಡಲಿಲ್ಲ. ಅವನು ಆಚೆ ಹೋದ ಮೇಲೆ ಕಾರ್ಮಿಕರು ಕೆಲ್ಸ ಪ್ರಾರಂಭ ಮಾಡಿ ಹೋ ಅಂತ ಕಿರುಚಿ, ಕುಣಿದಾಡಿದರು. ಇಡೀ ಫ್ಯಾಕ್ಟರಿಗೆ ಅವರು ಸ್ವೀಟ್ ಹಂಚಿದರು.

ನಂತರದಲ್ಲಿ ಎಲ್ಲಾ ಸಮಸ್ಯೆಗಳಲ್ಲಿ ಕಾರ್ಮಿಕರು ಒಗ್ಗಟ್ಟಾಗೋಕೆ ಪ್ರಾರಂಭ ಮಾಡಿದ್ರು, ವೆಲ್‌ಫೇರ್ ಆಫೀಸರ್‌ನೂ ಹಾಕಿದ್ರು. ನಿಮ್ಮ ಸಮಸ್ಯೆ ಇದ್ರೆ Welfare Officerಗೆ ಹೇಳಿ, ಹೊರಗಡೆ ಎಲ್ಲೂ ಹೋಗಬೇಡಿ ಅಂದ್ರು. ಅಭಯಾಶ್ರಮದ ವಿಜಯಲಕ್ಷ್ಮಿ ಶೆಟ್ಟಿ ಬಂದು 'ಯೂನಿಯನ್ ಮಾಡಬಾರದು. ಫ್ಯಾಕ್ಟರಿ ಮ್ಯಾನೇಜ್‌ಮೆಂಟ್ ಅಂದ್ರೆ ದೇವರು'. ಹೀಗೇ ಏನೇನೋ ಮಾತನಾಡಿದರು. ಕಾರ್ಮಿಕರು ನಮ್ಮ ಸಮಸ್ಯೆ ಪರಿಹಾರ ಮಾಡಿಕೊಳ್ಳೋಕೆ ಸಂಘಟನೆ ಮಾಡಿಕೊಳ್ತೀವಿ ಅಂತ ನಾನು ಹೇಳಿದೆ. ಯಾರ ಹತ್ರ ನಮ್ಮ ಸಮಸ್ಯೆ ಹೇಳಬೇಕು? ಹೋರಾಟ ಮಾಡದೇ ಇದ್ರೆ ನಮ್ಮ ಸಮಸ್ಯೆ ಬಗೆ ಹರಿಯೋದು ಹೇಗೆ? ಅಂತ ನಾನು ಮಾತನಾಡಿದೆ. 'ನಿಮ್ಗೆ ಬುದ್ಧಿ ಹೇಳೋಕೆ ಆಗಲ್ಲ, ಇದು ಸರ್ಕಾರೀ ಆಫೀಸ್ ಅಲ್ಲ, ಇಂತಹವರನ್ನೆಲ್ಲ ಕೆಲ್ಸದಿಂದ ತೆಗೆದುಬಿಡ್ರಿ, ಏನನ್ಕೊಂಡಿದಾರೆ ಇವ್ರು' ಅಂದ್ರು. '240 ದಿನ ಕೆಲ್ಸ ಮಾಡಿದ್ರೆ ಕೆಲ್ಸದಿಂದ ತೆಗೆಯೋಕೆ ಆಗಲ್ಲ ಅಂತ ನನ್ಗೂ ಗೊತ್ತಿದೆ, ಕೆಲ್ಸದಿಂದ ತಗೀರಿ ಅಂತ ಹೇಳೋಕೆ ನೀನು ಯಾರು'? ಅಂತ ನಾನೂ ಕೇಳಿದೆ. ನಾವು ಕುರಿಗಳಲ್ಲ ಅಂತ ಕೂಡಾ ಹೇಳಿದೆ.

ಇಲ್ಲಿಂದ ನನ್ನ ಮೇಲೆ ಕಿತಾಪತಿಗಳು ಪ್ರಾರಂಭವಾದ್ವು, 'ನೀವು ಸೂಪರ್‌ವೈಸರ್ ಆಗಿ. ಯಾವ ಕಾರ್ಮಿಕರಿಗೂ Suport

*ಯೂನಿಯನ್‌ನಿಂದ ಸುಮಾರು 10ಕೇಸ್ ಹಾಕಿ ಗೆದ್ದಿದೀವಿ. ಒಬ್ಬ ಕಾರ್ಮಿಕರು ಕುರ್ಚಿ ಮೇಲೆ ಕುಳಿತು ಮುರಿದು ಹಾಕಿದ್ರು ಅಂತ ಅವರನ್ನ ಕೆಲಸದಿಂದ ತೆಗೆದು ಹಾಕಿದ್ರು. ಅವರು ನಾಲ್ಕೂವರೆವರ್ಷ ಕೆಲ್ಸ ಮಾಡಿದ್ದರು. ಇನ್ನು ಆರು ತಿಂಗಳು ಕೆಲ್ಸ ಮಾಡಿದ್ದರೆ, ಅವರಿಗೆ ಗ್ರ್ಯಾಚುಯಿಟಿ ಸಿಕ್ತಾ ಇತ್ತು. ಕೆಲಸದಿಂದ ಕಿತ್ತು ಹಾಕಿದ್ರು, ನಾವು ಕೇಸ್ ಹಾಕಿದ ಮೇಲೆ ವಾಪಸ್ಸು ಕೆಲ್ಸಕ್ಕೆ ತೆಗೋತೀವಿ ಅಂದ್ರು ಕಳೆದ ಒಂದು ವರ್ಷದಿಂದ ಕೆಲಸ ಮಾಡ್ತಾ ಇದ್ದಾರೆ. 6 ತಿಂಗಳದ್ದು Back wages ಬರಬೇಕು. ಆದರೆ ಕೋರ್ಟ್‌ನಲ್ಲಿ ಕೇಸ್ ನಡೀತಾ ಇದೆ. ಯೂನಿಯನ್‌ಗೆ ಬಂದ್ರೆ ಹೆಚ್ಚು ಸಮಸ್ಯೆ ಇರೋಲ್ಲ. ಯಾಕಂದ್ರೆ ನಮ್ಗೆ Brandಗಳ support ಇದೆ. ಕೋಡ್ ಆಫ್ ಕಾಂಡಕ್ಟ್ ಇರುತ್ತೆ, ಫ್ಯಾಕ್ಟರಿಯವರು follow ಮಾಡಿರಬೇಕು. ನೀರಿನ ವ್ಯವಸ್ಥೆ, O.T. ಮಾಡಿದ್ರೆ Double Wages, 8 ಘಂಟೆ ಕೆಲ್ಸ, 1 ದಿನ ರಜೆ ಹೀಗೆ ಫ್ಯಾಕ್ಟರಿಯವರು ಇದೆಲ್ಲ ಸರಿಯಾಗಿ follow ಮಾಡಬೇಕು. ಇಲ್ಲದಿದ್ದರೆ order ಸಿಕ್ಕೋದಿಲ್ಲ. ಕಾರ್ಮಿಕರಿಗೆ ಶೋಷಣೆ ಮಾಡಿದ್ರೆ ಅವರಿಗೆ order ಸಿಕ್ಕಲ್ಲ. ಯೂನಿಯನ್‌ನಲ್ಲಿ ನಾವು ಗಟ್ಟಿಯಾಗೋದು ಮುಖ್ಯ. ನಮ್ಗೆ Brand support ಮಾಡ್ತಾರೆ. ಕಾರ್ಮಿಕರಿಗೆ ತೊಂದ್ರೆ ಮಾಡ್ತಾರೆ ಅಂದ್ರೆ ಅಲ್ಲಿ ಗ್ರಾಹಕರು ಕೊಂಡುಕೊಳ್ಳೋಲ್ಲ ಅಲ್ಲಿ N.G.O.ಗಳು ಕ್ಯಾಂಪೇನ್ ಮಾಡ್ತಾರೆ. ಈ ತರಹದ ಲಿಂಕ್ಸ್ ನಮಗೆ ಇದೆ.*

* * *

*ಜೊತೆಗಿರೋ 5 ಜನ ಕಾರ್ಮಿಕರಿಗೆ ಸೂಪರ್‌ವೈಸರ್ ಹಾಗೆ ಹುದ್ದೆ ಕೊಟ್ರು. ಅವರಿಗೆ Production ಒತ್ತಡ ಜಾಸ್ತಿ ಆಯಿತು. ಅದಾಗದಿದ್ದಾಗ ಇವರೇ ಕೆಲಸ ಬಿಡಬೇಕಾಯ್ತು, ಕಾರ್ಮಿಕರಿಗೆ ಹಿಂಸೆ ಕೊಡುತ್ತಾರೆ. ಸೂಪರ್‌ವೈಸರ್ ಮಾಡ್ತಾರೆ ಅಂದ್ರೆ ನಮ್ಮನ್ನೆಲ್ಲ ಬೇರೆ ಮಾಡೋಕೆ ಅಂತ ಮೊದ್ಲೇ ಹೇಳಿದೆ. ಅವರು ಕೇಳಲಿಲ್ಲ. ಸಂಬಳ ಜಾಸ್ತಿ ಬರುತ್ತೆ, ಇಷ್ಟ ಇದೆ ಅಂತ ಹೋದ್ರು. ನಂತರ ಅವರನ್ನ ಕೆಲ್ಸದಿಂದ ತೆಗೆದು ಹಾಕಿಬಿಟ್ರು. ಮ್ಯಾನೇಜ್‌ಮೆಂಟ್ ಜೊತೆ ಮತ್ತೆ ಮಾತಾಡಿ ಕೆಲ್ಸ ಕೊಡ್ಸಿದೆವು. ಇತರ ಕಾರ್ಮಿಕರು ನಮ್ ಬಗ್ಗೆ ವ್ಯಂಗ್ಯವಾಗಿ ಮಾತಾಡ್ತಾರೆ ಅಂತ ಇಬ್ಬರು ಹೊರಟು ಹೋದ್ರು, ಮೂರು ಜನ ಕೆಲ್ಸ ಮಾಡ್ತಿದಾರೆ.*

* * *

*ಮೈಸೂರು ರೋಡ್ ಫ್ಯಾಕ್ಟರೀಲಿ ಕೆಲ್ಸ ಮಾಡ್ತಾ ಇದ್ದ ಕಾರ್ಮಿಕಳೊಬ್ಬಳು ಫ್ಯಾಕ್ಟರಿಗೆ ಲೇಟ್ ಆಗಿ ಬಿಡುತ್ತೆ ಅಂತ ಚಲಿಸುತ್ತಲೇ ಇದ್ದ ಟ್ರೈನಿಂದ ಹಾರಿ ಸತ್ತು ಹೋದ್ಲು. ಪ್ರಮೀಳಾ ನೇಸರ್ಗಿ ನೋಡೋಕೆ ಹೋಗಿದ್ರು. ಫ್ಯಾಕ್ಟರಿ close ಮಾಡಲಾಯಿತು. ಆದರೆ ಅವಳಿಗೆ ಮಕ್ಕಳು ಎಷ್ಟಿವೆ, ಅವಳ ಕುಟುಂಬದ ವ್ಯವಸ್ಥೆ ಏನು ಅಂತ ಅವರು ನೋಡಲಿಲ್ಲ. ಚನ್ನಪಟ್ಟಣದ ಹತ್ತಿರ ಆಕೆಯ ಊರು. ನಾವು ಅವರ ಊರಿಗೆ ಹೋದ್ವಿ. ESI, ಶವಸಂಸ್ಕಾರಕ್ಕೆ ಬರಬೇಕಾದ 3000, ಕಾರ್ಮಿಕ ಕಲ್ಯಾಣ ಮಂಡಳಿಯಿಂದ 3000 ಕೊಡಿಸಿದ್ವಿ, ಮಕ್ಕಳಿಗೆ pension ಬರೋ ತರಹ ಮಾಡಿದ್ವಿ. ಹೀಗೆ ಅಪಘಾತ, ಆತ್ಮಹತ್ಯೆಯಂತಹ ಕೇಸ್‌ಗಳನ್ನು ನಾವು ತಗೊಂಡಿದೀವಿ.*

ಮಾಡಬೇಡಿ' ಅಂತ ನಯವಾಗಿ ಹೇಳಿದ್ರು. ಯಾಕಂದ್ರೆ ಬೇರೆ ಕಾರ್ಮಿಕರಿಗೆ ಬಯ್ದರೆ ನಾನು ಕೇಳ್ತೀನಲ್ಲ ಅದಕ್ಕೆ. ಕೆಲ್ಸದಲ್ಲಿ ತಪ್ಪಿದ್ರೆ ಹೇಳಿಕೊಡಿ, ಕೆಲ್ಸದಿಂದ ತೆಗೆದು ಹಾಕಿಬಿಟ್ರೆ ಹೇಗೆ, ಅವರಿಗೆ ಎಷ್ಟೊಂದು ಸಮಸ್ಯೆ ಇರುತ್ತೆ ಅಂತ ನಾನು ಹೇಳ್ತಾಇದ್ದೆ. ನಮ್ಮ ಗುಂಪು ಬಲವಾಗಿತ್ತು, ಅವರಿಗೆ ನಾವು ತುಂಬಾ ತಲೆ ನೋವಾಗಿದ್ವಿ, 5 ವರ್ಷ ಸರ್ವೀಸ್ ಮಾಡಿದೋರೇ 20 ಜನ ಇದ್ವಿ, ಹಾಗಾಗಿ ಅವರು ನಮ್ಮನ್ನು, ಡಿವೈಡ್ ಮಾಡೋಕೆ ಅಲ್ಲಿ, ಇಲ್ಲಿ, ಮೇಲೆ, ಕೆಳಗೆ ಅಂತ ಬೇರೆ ಬೇರೆ ಬ್ಯಾಚ್ ಮಾಡಿದ್ರು. ಕಾರ್ಮಿಕರಿಗೆ ಎತ್ತಿಕೊಡೋಕೆ ಪ್ರಯತ್ನಪಟ್ರು, ಹೀಗೆ ಅವರು ಏನೇನೋ ಪ್ರಯತ್ನ ಪಡ್ತಾನೇ ಇದ್ರು, 2006ರಲ್ಲಿ ನಮ್ಮ ಯೂನಿಯನ್ Registration ಆಯಿತು. ನಂತರದಲ್ಲಿ ಯೂನಿಯನ್ Consultation ಆಯಿತು, 3 ದಿನ. ಒಂದು ದಿನ ರ್‍ಯಾಲಿ ಇತ್ತು. Press meet ಇತ್ತು. ಇದರಲ್ಲಿ ನನ್ನ ಹೆಸರು ಬಂತು. ಜನರಲ್ ಸೆಕ್ರೆಟರಿ ರುಕ್ಮಿಣಿ ಅಂತ. 50 ಜನನ್ನ ಕರ್‍ಕೊಂಡು ಹೋಗಿ ನಾನು ಯೂನಿಯನ್ ಮೆಂಬರ್‌ಶಿಪ್ ಕೊಡ್ಸಿದ್ದೆ. ಅದು ಮ್ಯಾನೇಜರ್‌ಗೆ ಗೊತ್ತಾಯ್ತು. P.M.(Production Manager) ಗೆ ಗೊತ್ತಾಯ್ತು, ಆ ನಂತರ ನನ್ನನ್ನ ಬೇರೆ ಬೇರೆ ಕೆಲ್ಸಕ್ಕೆ ಹಾಕಿದ್ರು, Production ಒತ್ತಡ ತರೋಕೆ ಪ್ರಯತ್ನಿಸಿದ್ರು. "ನನ್ ಕೈ ಸೆಟ್ ಆಗಬೇಕು, ಬೇರೆ ಕೆಲ್ಸ ಕೊಟ್ಟುಬಿಟ್ಟಿದೀಯ, ನಾನು Time waste ಮಾಡ್ತಾ ಇಲ್ವಲ್ಲ, ನೀನು ಇಲ್ಲೇ ನಿಂತುಕೊಂಡು ನೋಡು" ಅಂತ ನಾನೂ ಹೇಳ್ತಾ ಇದ್ದೆ. ಕ್ಯಾಬಿನ್‌ಗೆ ಕರೆದು ಬಯ್ದರು. ರುಕ್ಮಿಣಿ Production ಕೊಡ್ತಾ ಇಲ್ಲ ಅಂತ ಮೈಕ್‌ನಲ್ಲಿ announce ಮಾಡಿದ್ರು, quality ಕೊಡ್ತಾ ಇಲ್ಲ ಅಂತ ಹಿಂಸೆ ಕೊಡೋವ್ರು.

ಆ ಸಮಯದಲ್ಲಿ ಸಾಕಮ್ಮ ಅನ್ನೋ ಕಾರ್ಮಿಕಳಿಗೆ ಅಬಾರ್ಷನ್ ಆಗಿತ್ತು. 6–30ರ ಮೇಲೆ O.T. ಮಾಡಿ ಅಂತ ಆಯಮ್ಮನಿಗೆ ಹೇಳಿದ್ರು, ಆಕೆ ಅಬಾರ್ಷನ್ ಆಗಿದ್ದ ವಿಚಾರ ಯಾರಿಗೂ ಹೇಳಿರಲಿಲ್ಲ. O.T. ಮಾಡೋಕೆ ಆಗಲ್ಲ ಅಂದಿದ್ದಕ್ಕೆ, ನಾಳೆ ನೀನು ಕೆಲ್ಸಕ್ಕೆ ಹೇಗೆ ಬರ್ತೀಯ ನೋಡ್ತೀನಿ, ಅಂದಿದಾರೆ. ಆಯಮ್ಮ ಬೆಳಿಗ್ಗೆ ಬಂದ್ರು. ಅವರಿಗೆ ಒಳಗೆ ಬಿಟ್ಟಿಲ್ಲ. ಸೆಕ್ಯೂರಿಟಿ ರೂಂನಲ್ಲಿ ಕೂಡಿ ಹಾಕಿ, ನೀನು ಕೆಲ್ಸಕ್ಕೆ ರಾಜೀನಾಮೆ ಕೊಡು, ಸೆಟ್ಲಮೆಂಟ್ ತೆಗೋ ಅಂತ ಹೇಳಿದಾರೆ, ಹಿಂಸೆ ಕೊಟ್ಟು ಕಳಿಸಿದಾರೆ. ನಮ್ಗೆ ಗೊತ್ತೇ ಇಲ್ಲ. ಊಟದ ಸಮಯದಲ್ಲಿ ನೋಡಿದ್ರೆ ಆಯಮ್ಮನ್ನ ಕೂಡಿ ಹಾಕಿದಾರೆ! ಒಳಗಡೆ ಬರೋಕೇ ಬಿಡ್ತಾ ಇಲ್ಲ ಅಂತ ತಿಳೀತು. ಸಾಯಂಕಾಲ ನಾವೆಲ್ಲ ಸೇರಿ ಬ್ಯಾಟರಾಯನಪುರ ಪೊಲೀಸ್ ಸ್ಟೇಷನ್‌ನಲ್ಲಿ ಕಂಪ್ಲೇಂಟ್ ಕೊಟ್ವೆವು. ವಾಣಿವಿಲಾಸ ಆಸ್ಪತ್ರೆಗೆ ಆಕೆಯನ್ನು ಕಳಿಸಿ ಅಬಾರ್ಷನ್ ಆಗಿತ್ತು ಅಂತ ಸರ್ಟಿಫಿಕೇಟ್ ತಗೊಂಡ್ವಿ. ಮರುದಿನ ಫ್ಯಾಕ್ಟರಿ ಗೇಟ್ ಹತ್ರ ನಿಂತುಕೊಂಡು ಹತ್ತು ಜನ ಎಲ್ಲಾ ಕಾರ್ಮಿಕರ ತೋಳಿಗೆ ಕಪ್ಪು ಟೇಪು ಕಟ್ಟಿದ್ವಿ, ಕೆಲ್ಸ ಮಾಡಿ, ಪ್ರತಿಭಟನೆ ಮಾಡೋಣ ಅಂತ ತೀರ್ಮಾನ ಮಾಡಿದ್ವಿ, ನಮ್ಮಲ್ಲಿ ಒಬ್ಬ ಕಾರ್ಮಿಕಳಿಗೆ ಮಾಡಿರೋ ಅನ್ಯಾಯಕ್ಕೆ ಈ ಪ್ರತಿಭಟನೆ ಅಂದ್ಕೊಂಡ್ವಿ. 600 ಜನ ಕಾರ್ಮಿಕರಿಗೆ ಟೇಪ್ ಕಟ್ಟಿ ಕಳಿಸಿದ್ವಿ. ಸೂಜಿ ಬಿದ್ರೆ ಶಬ್ದ ಆಗಬೇಕು, ಅಷ್ಟು ನಿಶ್ಯಬ್ದದಲ್ಲಿ ನಾವು ಕೆಲ್ಸ ಮಾಡ್ತಾ ಇದ್ವಿ, ಸೂಪರ್‌ವೈಸರ್ ಯಾಕೆ ಕಪ್ಪು ಟೇಪು ಕಟ್ಟಿಕೊಂಡಿದೀರಾ ಅಂದ್ರೆ ಯಾರೂ ಮಾತನಾಡಲಿಲ್ಲ. ಪೆನ್ಸಿಲ್‌ನಲ್ಲಿ ಬರೆದುಕೊಟ್ವಿ, ಅದನ್ನ ಕ್ಯಾಬಿನ್‌ಗೆ ತೆಗೆದುಕೊಂಡು ಹೋದ್ರು, ನಂತರ ನಾವು ಮಾಡಿದ್ದು ತಪ್ಪಾಯ್ತು ಅಂತ ಕ್ಷಮೆ ಕೇಳಿದ್ರು.

*(ಮುಂದುವರಿಯುವುದು)*

# ಲಟ್ಟಣಿಗೆ



ಹಿಟ್ಟಿಗೆ ಹದವಾಗಿ ನೀರು ಬಿದ್ದರೆ
ನಮ್ಮ ಮನಸ್ಸಿಗೆ ಬಂದಂಥ
ಆಕಾರ ಕೊಡಬಹುದು

ಹಸ್ತದಲ್ಲಿ ತಿಕ್ಕಿ ಮೆತ್ತಗೆ ನಾದಿ
ಒತ್ತಿ ಗುಂಡು ಕಟ್ಟಿ
ಎರಡೂ ಬದಿ ಹಿಟ್ಟಿನಲ್ಲದ್ದಿ
ತುಸು ಲಟ್ಟಿಸಿ
ಒಳ ಹೊರಗಿನ ಪದರಿಗೆಲ್ಲ
ಎಣ್ಣೆ ಸವರಿ ಮಡಿಸುತ್ತ

ತಳದಲ್ಲಿ ಮಣೆ
ಮೇಲೆ ಲಟ್ಟಣಿಗೆ
ಮಧ್ಯೆ ತ್ರಿಕೋನ
ಮಾಯೆಯಂತೆ ಗೋಲವಾಗುವುದು

ಇತ್ತ ಕಲ್ಲಿಗೂ ಅಂಟದೇ
ಅತ್ತ ಲಟ್ಟಣಿಗೆಗೂ ಹಿಡಿಯದೇ
ಮೈದಾಳಿದ್ದು
ಯಾವ ಭೂಭಾಗದ್ದೂ ಆಗಬಹುದು

ಆದರಿಲ್ಲಿ
ಲಟ್ಟಣಿಗೆ ಎತ್ತೆತ್ತಲೋ ಆಡಿ
ಮೇಲೇರಿದವನ ನೆತ್ತಿ ಒತ್ತುತ್ತ
ನೆಲ ಕಚ್ಚಿದವನ ಅಲ್ಲೇ ತುಳಿಯುತ್ತ
ಅಂತರ್ಮುಖಿಯಾದದ್ದಕ್ಕೆ
ಮೂಡಿಹುದು ಅಲ್ಲಲ್ಲೇ
ಗೆರೆ ಕೊರೆತ ತಗ್ಗು ದಿನ್ನೆ
ದೇಶ ಖಂಡಗಳು

ಈಗ ಪುನಃ ಹರಿದ ಗೋಲವ
ಮುಷ್ಟಿಯಲ್ಲೇ ಮುದ್ದೆ ಕಟ್ಟಬೇಕು
ಶ್ರದ್ಧೆಯ ಲಟ್ಟಣಿಗೆಯಿಂದ
ನಾಜೂಕಾಗಿ ಲಟ್ಟಿಸಬೇಕು

ನೋಡ ನೋಡ್ತ ಇದೋ ಇಲ್ಲಿ
ಚೂರು–ಗೀರು ಒಟ್ಟು ಸೇರಿ
ಗೆರೆ ತೋರದಂತೆ ಅಳಿಸಿ ಹೋಗಿ
ಒಂದೇ ಭೂಗೋಲವಾಗಿದೆ.

ಈ ವಿಶ್ವಪಥದ ಹಾದಿಯಲ್ಲಿ
ಪದರು ಪದರು ರುಚಿ
ಮನುಜ ಮತದ ಹೆಂಚಿನಲ್ಲಿ
ಬೆಂದ ಆತ್ಮವೇ ಶುಚಿ.

● *ಸುನಂದಾ ಪ್ರಕಾಶ ಕಡಮೆ*



# ಮುಕ್ತಜೋಡಿಯಾ: ಅನ್ಯಾಯದ ವಿರುದ್ಧ ಹರಿಯುತಿಹುದು ಆಕ್ರೋಶದ ರಕ್ತ ನರ, ನಾಡಿಗಳಲ್ಲಿ

● *ಸೇತುಮಾಧವ ಎಂ.ಎ.*

**2**004–2005ರಲ್ಲಿ ಒರಿಸ್ಸಾ ರಾಜ್ಯದ ರಾಮಗಢ, ಕಾಲಹಂದಿ, ಕೋರಾಪುಟ್ ಜಿಲ್ಲೆಗಳಲ್ಲಿ ವಿಭಿನ್ನ ರೀತಿಯ ಸಾಕ್ಷ್ಯ ಚಿತ್ರಗಳನ್ನು ನಿರ್ಮಿಸುವ ಅವಕಾಶ ದೊರೆಯಿತು. 'Freedom from Hunger'. 'Walk water walk' ಹಾಗೂ 'Voices from the Hills' ಎಂಬ ಹೆಸರಿನ ಚಿತ್ರಗಳನ್ನು ನಾನು ನಿರ್ಮಿಸಿದೆ. 'Voices from the Hills' ಚಿತ್ರ ನನ್ನ ಎಲ್ಲ ಗಮನವನ್ನೂ ಸೆಳೆಯಿತು. ಒರಿಸ್ಸಾ ರಾಜ್ಯವೇ ಒಂದು ಬುಡಕಟ್ಟು ರಾಜ್ಯ. ಒಂದೆಡೆ ನಕ್ಸಲೀಯರ ಗಲಭೆ ಪೀಡಿತ ಪ್ರದೇಶಗಳು, ಇನ್ನೊಂದೆಡೆ ಸಂಪದ್ಭರಿತ ಸಂಪನ್ಮೂಲ ವನ್ನು ಅನೂಚಾನವಾಗಿ ದೋಚುವ ಹುನ್ನಾರ. ಇವುಗಳ ಮಧ್ಯೆ ಮುಗ್ಧ ಬುಡಕಟ್ಟುಗಳ ಅಸಹನೀಯ ಬದುಕು. ಈ ಎಲ್ಲ ಸನ್ನಿವೇಶಗಳನ್ನು ಸೆರೆಹಿಡಿಯುತ್ತಿರುವಾಗ ಭೇಟಿಯಾದ ಅಪರೂಪದ ವ್ಯಕ್ತಿ, ವ್ಯಕ್ತಿತ್ವ – ಮುಕ್ತಜೋಡಿಯಾ.

ಮುಕ್ತಜೋಡಿಯಾ, ಒರಿಸ್ಸಾ ರಾಜ್ಯದ ರಾಯಗಢ ಜಿಲ್ಲೆಯ ಕಾಶೀಪುರ ಕ್ಷೇತ್ರದ ಸಿರಿಗುಡ ಎಂಬ ಪುಟ್ಟ ಹಾಡಿಯ ದಿಟ್ಟ ವ್ಯಕ್ತಿ. ಸುಮಾರು 50 ವರ್ಷಗಳನ್ನು ಸಮೀಪಿಸುತ್ತಿರುವ 'ಮುಕ್ತ ಜೋಡಿಯಾ'ರ ತೀಕ್ಷ್ಣ ದೃಷ್ಟಿ, ನೇರ ನುಡಿ ಎಂತಹವರನ್ನೂ ಮೋಡಿಗೊಳಿಸುತ್ತದೆ.

ಅಂದು ಬೆಳಗು ಹರಿಯುವ ಮೊದಲೇ ಕಾಶೀಪುರದಿಂದ ಹೊರಟ ನಾವು, ಮುಕ್ತ ಜೋಡಿಯಾ ಅವರ ಹಾಡಿ ತಲುಪಿದಾಗ ಚುಮುಚುಮು ಚಳಿ. ಆಗಷ್ಟೇ ಸೂರ್ಯನ ಕಿರಣಗಳು ಮೈಯನ್ನು ಆವರಿಸಿಕೊಳ್ಳುತ್ತಿತ್ತು. ನಾವು ಹೋದಕ್ಷಣದಲ್ಲಿ ಮಹಿಳೆಯರು ಮತ್ತು ಪುರುಷರು ಕುಕ್ಕರಗಾಲಿನಲ್ಲಿ ಸಾಲುಸಾಲಾಗಿ ಕುಳಿತಿದ್ದರು. ಅದರಲ್ಲಿ ಹಳದಿ ಸೀರೆಯ ಮೇಲೆ ಕೆಂಪು ಬಿಂದಿಗಳ ಚಿತ್ತಾರದ ಸೀರೆಯನ್ನು ಉಟ್ಟು, ತನ್ನ ಪಾಡಿಗೆ ತಾನು ಎಂಬಂತೆ ಕುಳಿತಿದ್ದ ವ್ಯಕ್ತಿ, ಮಾತನಾಡಲು ಆರಂಭಿಸಿದಾಗ ತೆರೆದುಕೊಂಡ ಲೋಕ, ಆ ಪುಟ್ಟ ಹಾಡಿಯ ಶಾಲೆಗೆ ಹೋಗದ, ಓದು ಬಾರದ ಮುಗ್ಧ ಹೃದಯದಲ್ಲಿ ಜತನವಾಗಿ ಕಾಪಾಡಿಕೊಂಡು ಬಂದ ಆಕ್ರೋಶದ ಹೊಗೆ, ಕ್ರಮೇಣ ಕಾಡ್ಗಿಚ್ಚಾಗಿ ಹಬ್ಬಿತ್ತು.

ಕಾರ್ಪೊರೇಟ್ ಕ್ರೈಮ್ ವಿರುದ್ಧ ಹೋರಾಡುವ ಮಹಿಳೆಯರಿಗಾಗಿಯೇ ಮೀಸಲಿರುವ 'ಚಿಂಗಾರಿ' ಪ್ರಶಸ್ತಿಯನ್ನು ಪಡೆದ ಪ್ರಥಮ ಆದಿವಾಸಿ ಮಹಿಳೆ ಹಾಗೂ ನಾಯಕಿ ಮುಕ್ತಜೋಡಿಯಾ. ಮಧ್ಯಪ್ರದೇಶದ ರಾಜಧಾನಿ ಭೂಪಾಲ್‌ನ 'ರವೀಂದ್ರ ಭವನ'ದಲ್ಲಿ ನಡೆದ ಕಿಕ್ಕಿರಿದ ಜನಸ್ತೋಮದ ಮಧ್ಯೆ, "ಒರಿಸ್ಸಾದ ಕಾಶೀಪುರದಲ್ಲಿ ಹಿಂಡಾಲ್ಕೊ ನೇತೃತ್ವದ 'ಉತ್ಕಲ್ ಅಲ್ಯುಮಿನ ಬಾಕ್ಸೈಟ್' ಗಣಿ ಯೋಜನೆಯ ವಿರುದ್ಧ ನಡೆಸಿರುವ ಹದಿಮೂರು ವರ್ಷಗಳ ಅವಿರತ ಹೋರಾಟದ ಮುಂಚೂಣಿಯಲ್ಲಿರುವ ಮುಕ್ತಜೋಡಿಯಾ" ಎಂದು ಘೋಷಿಸಿದಾಗ, ಸೊರಗಿದ ದೇಹದ, ನಾಚಿಕೆ ಹಾಗೂ ದೃಢ ಮುಖಭಾವದ ಮಹಿಳೆ ಎದುರಿಗೆ ಬಂದಾಗ, ಈಕೆಯೇ! ಎಂಬ ಉದ್ಗಾರ. ತನ್ನ ಹೋರಾಟದ ಬಗ್ಗೆ ಮುಕ್ತಜೋಡಿಯಾ ಹೇಳುವುದು ಹೀಗೆ:

"ನಾನು ರೈತಾಪಿ ಕುಟುಂಬದ ಹಿನ್ನೆಲೆಯಿಂದ ಬಂದವಳು. ಬಾಲ್ಯದಿಂದಲೂ ಉತ್ತುವ, ಬಿತ್ತುವ, ಕೊಯ್ಲು ಮಾಡುವ ಕಾಯಕ ಇದ್ದ ನಮ್ಮ ಐದು ಎಕರೆ ಭೂಮಿಯಲ್ಲಿ ನಾವು ರಾಗಿ, ಬತ್ತ, ಮೆಕ್ಕೆಯನ್ನು ಬೆಳೆಯುತ್ತಿದ್ದೆವು. ಹಾಗೆಯೇ ಬಾಳೆ, ಮಾವು, ಲಿಂಬೆಹಣ್ಣುಗಳನ್ನು ಬೆಳೆಯುತ್ತಿದ್ದೆವು. ನಾನು ಶಾಲೆಗೆ ಹೋಗಲಿಲ್ಲ. ಆದರೆ ನನ್ನ ಮಕ್ಕಳು ಶಿಕ್ಷಿತರಾಗಿದ್ದಾರೆ. ನನ್ನ ಮಗಳಿಗೆ ಓದುವುದು, ಬರೆಯುವುದು ಗೊತ್ತು. ನನ್ನ ಕಿರಿಮಗ ಪ್ರಾಥಮಿಕ ಶಾಲೆಗೆ ಹೋಗಿದ್ದಾನೆ. ನಾನಿರುವ ಹಳ್ಳಿ ಖಂಡಿತಾ ಒಂದು ಕುಗ್ರಾಮ. ಆದರೆ ಸುಂದರವಾಗಿದೆ. ಅಲ್ಲಿಯ ಪರಿಸರ, ಸ್ನಿಗ್ಧಸೌಂದರ್ಯ, ಶಾಂತತೆ ಎಲ್ಲದರೊಂದಿಗೆ ಇದ್ದ ಅವಿನಾಭಾವ ಸಂಬಂಧವನ್ನು ಈ ಗಣಿ ಯೋಜನೆ ಕತ್ತರಿಸಿ ಹಾಕಿದೆ.

"ಗಣಿ ಉದ್ದಿಮೆ ನಮ್ಮ ಜೀವನಗಳಲ್ಲಿ ಬಂದಾಗ, ನಮ್ಮ ಹಳ್ಳಿಯ ಬದುಕೇ ಬದಲಾಗಿ ಬಿಟ್ಟಿತು. ಆಶಾಂತತೆ ಮಾಯವಾಗಿದೆ. ಸದಾ ಭಯದ ಕರಿನೆರಳಲ್ಲಿ ಬದುಕು. ಒಗ್ಗಟ್ಟಾಗಿದ್ದ ನನ್ನ ಹಳ್ಳಿ, ಈಗ ಪ್ರತಿರೋಧದ ಗುಂಪು ಹಾಗೂ ಉದ್ದಿಮೆಯನ್ನು ಬೆಂಬಲಿಸುವ ಇನ್ನೊಂದು ಗುಂಪು ಎಂದು ಇಬ್ಭಾಗವಾಗಿದೆ. ಇದಕ್ಕೆ ಮೂಲಕಾರಣ ಪೊಲೀಸ್‌ರವರು ಸೃಷ್ಟಿಸಿರುವ ಹೆದರಿಕೆ. ನಮ್ಮ ನಿತ್ಯ ಜೀವನದಲ್ಲಿ ಪೊಲೀಸರು ಯಾವುದೇ ಕಾರಣ ಸಬೂಬು ಇಲ್ಲದೆ, ಯಾರನ್ನು ಬೇಕಾದರೂ ಎಳೆದೊಯ್ಯಬಹುದು. ವಿಶ್ವನಾಥ ಎಂಬ ನಮ್ಮ ಹಳ್ಳಿಯ ಮುಗ್ಧನನ್ನು ಎಳೆದೊಯ್ದು ಜೈಲಿಗೆ ಹಾಕಿದರು. ಎರಡು ತಿಂಗಳಿನಿಂದ ಅಲ್ಲಿಯೇ ಕೊಳೆಯುತ್ತಿದ್ದಾನೆ. ಹೊಲದಲ್ಲಿ ದುಡಿಯಲು ಯಾರೂ ಇಲ್ಲದೆ ಅವನ ಹೆಂಡತಿ ಮಕ್ಕಳು ಅನಾಥರಾಗಿದ್ದಾರೆ. ಅವರು ಉಪವಾಸದಿಂದ ಸಾಯದಿರಲಿ ಎಂದು ನಮ್ಮಲ್ಲಿ ಕೆಲವರು ಅವರಿಗೆ ಸಹಕರಿಸುತ್ತಿದ್ದೇವೆ. ವಿಶ್ವನಾಥನ ಬಂಧನದ ಸುದ್ದಿ ತಿಳಿದ ತತ್‌ಕ್ಷಣದಿಂದಲೇ ನಾವು ಸಭೆಗಳನ್ನು ಸಂಘಟಿಸಲು ಶುರುಮಾಡಿದೆವು. ಆದರೆ, ಯಾರನ್ನೂ ನಂಬುವಂತಿಲ್ಲ. ಯಾಕೆಂದರೆ ನಮ್ಮಲ್ಲಿ ಕೆಲವರಿಗೆ ಗಣಿ ದೊರೆಗಳು ಹಣ ಕೊಡುತ್ತಾರೆ. ಅವರನ್ನು ಗೂಢಚಾರರನ್ನಾಗಿ ಮಾಡಿದ್ದಾರೆ. ಈ ಗೂಢಚಾರರು ಹಳ್ಳಿಯ ಪ್ರತಿರೋಧಿಗಳ ಸುಳಿವುನೀಡಿ, ಬಂಧಿಸುವಂತೆ ಮಾಡುವುದರಿಂದ ಭಯದ ವಾತಾವರಣ, ತನ್ಮೂಲಕ ನಮ್ಮ ಧ್ವನಿಯನ್ನು ಹೊಸಕಿ ಹಾಕುವ ಸಂಚು.

ಗಣಿ ಕಾರ್ಖಾನೆಯನ್ನು ವಿರೋಧಿಸಲು ಸುಮಾರು ವರ್ಷಗಳಿಂದಲೂ ನನ್ನ ಸಮುದಾಯದ ಜನರನ್ನು ಸಂಘಟಿಸುತ್ತಿದ್ದೇನೆ. ಸುತ್ತಮುತ್ತಲ ಹಳ್ಳಿಗಳಿಗೆ ಹೋಗಿದ್ದೇನೆ. ಜನರೊಂದಿಗೆ

ಮಾತನಾಡಿದ್ದೇನೆ. "ಈ ಕಂಪನಿಯು ದುರಾಸೆಯಿಂದ ವರ್ತಿಸುತ್ತಿದೆ. ನಮ್ಮ ಬೆಟ್ಟ, ತಪ್ಪಲುಗಳು ಬಾಕ್ಸೈಟ್ ಅದಿರಿನ ಶ್ರೀಮಂತಿಕೆಯನ್ನು ಹೊಂದಿವೆ, ತತ್‌ಸಂಬಂಧಿ ಗಣಿ ಉದ್ದಿಮೆಯನ್ನು ಆರಂಭಿಸುವುದು ಅವರ ಹುನ್ನಾರ. ಈ ಪ್ರಕ್ರಿಯೆಯಲ್ಲಿ ನಮ್ಮನ್ನು ನಮ್ಮ ಹೆತ್ತೊಡಲಿನಿಂದ ಕಿತ್ತು, ನಿರ್ಗತಿಕರನ್ನಾಗಿ ಮಾಡುತ್ತಿದ್ದಾರೆ" ಎಂದು ಜನರ ಮನವೊಲಿಸುತ್ತೇನೆ. ನನ್ನಲ್ಲಿ ಆವಿರ್ಭವಿಸುವ ಕೋಪ ಅವರಲ್ಲೂ ಮೂಡುವಂತೆ ಭಾಷಣ ಮಾಡುತ್ತೇನೆ. ನನ್ನ ಈ ಕಾರ್ಯದಲ್ಲಿ ನನ್ನ ಗಂಡ, ಮಕ್ಕಳು ಸಂಪೂರ್ಣ ಬೆಂಬಲ ನೀಡುತ್ತಿದ್ದಾರೆ. ನನ್ನ ಜೊತೆ ಅವರೂ ನಡೆಯುತ್ತಾರೆ. ಹಳ್ಳಿಯಿಂದ ಹಳ್ಳಿಗೆ ಬರುತ್ತಾರೆ. ಇಲ್ಲಿಯ ಕಾಲುದಾರಿ ಬಲು ಕಠಿಣ ಹಾಗೂ ಪ್ರಾಣಾಂತಿಕ. ಮಳೆಗಾಲದಲ್ಲಂತೂ ಕಾಲ್ನಡಿಗೆಯಲ್ಲಿ ನಡೆಯುವುದೇ ಅಸಾಧ್ಯ. ನಾನು ಎಲ್ಲರಿಗೂ ಹೇಳುವುದು ಇಷ್ಟೇ. ನಾವೀಗ ಅತ್ಯಂತ ಪ್ರಭಾವಿ ಶತ್ರುವಿನ ವಿರುದ್ಧ ಹೋರಾಡುತ್ತಿದ್ದೇವೆ. ಅವರಿಗೆ ನಮ್ಮ ಹಕ್ಕಿನ ಬಗ್ಗೆ ಯಾವುದೇ ಗೌರವವಿಲ್ಲ. ನಮ್ಮನ್ನು ಶತಾಯ ಗತಾಯ ಒಕ್ಕಲೆಬ್ಬಿಸಲು ಸನ್ನದ್ಧರಾಗಿದ್ದಾರೆ.

"ಹೋರಾಟಕ್ಕೆ ಸಿದ್ಧರಾಗಲು ನಾವೊಂದು ಗುಂಪು ಮಾಡಿಕೊಂಡೆವು. 'ಪ್ರಾಕೃತಿಕ ಸಂಪತ್ತು ಸುರಕ್ಷಾ ಪರಿಷದ್' ಎಂದು ಹೆಸರಿಟ್ಟೆವು. ನಾನು ಗುಂಪಿನ ಒಬ್ಬ ಸಾಮಾನ್ಯ ಸದಸ್ಯೆ. ಅಧಿಕಾರದ ಯಾವುದೇ ಅಧಿಕೃತ ಚುಕ್ಕಾಣಿ ಇಲ್ಲ. ನಾವು ಸಾವಿರಮಂದಿ ಸದಸ್ಯರಿದ್ದೇವೆ. ನನ್ನೊಳಗೆ ನನ್ನ ಜನರಿಗೋಸ್ಕರ ಹೋರಾಡುವ ಹಕ್ಕೊತ್ತಾಯಕ್ಕೆ ಆಗ್ರಹ ಪಡಿಸುವ ಒಳಗಿನ ತುಡಿತವಿದೆ, ಆ ಶಕ್ತಿಯಿದೆ. ನನ್ನ ಜನತೆಯನ್ನು ಪ್ರೇರಿಸುವ, ಹೋರಾಟದ ಹಾದಿಯಲ್ಲಿ ಕೊಂಡೊಯ್ಯುವ ಶಕ್ತಿ ನನ್ನಲ್ಲಿದೆ ಎಂಬುದು ನನ್ನ ನಂಬಿಕೆ.

"ನಮ್ಮ ನೆಲದಿಂದ ನಮ್ಮನ್ನು ಎತ್ತಂಗಡಿ ಮಾಡುವ ಅವರ ಪ್ರಯತ್ನಗಳಿಗೆ ನಮ್ಮಲ್ಲಿರುವ ಒಂದೇ ದಾರಿಯೆಂದರೆ, ನಮ್ಮ ಜೀವನೋಪಾಯಕ್ಕೆ ಆಧಾರವಾಗಿರುವ ನಮ್ಮ ಭೂಮಿಗಳಿಂದ ನಮ್ಮನ್ನು ಎತ್ತಂಗಡಿ ಮಾಡದಂತೆ ಪ್ರತಿರೋಧಿಸುವುದೇ ಆಗಿದೆ. ಅದಕ್ಕೋಸ್ಕರ ನಾವು 'ರುಕ್ಮಾ' ಎಂಬ ಹಳ್ಳಿಯಲ್ಲಿ ರಸ್ತೆತಡೆ ಹೋರಾಟ ನಡೆಸಿದೆವು. ಕಾರ್ಖಾನೆ ಸ್ಥಳಕ್ಕೆ ಬರುವ ಕಂಪನಿಯ ಕಾರು, ಬಸ್ಸುಗಳನ್ನು ತಡೆದೆವು. 2,500ಕ್ಕೂ ಹೆಚ್ಚು ಮಂದಿ ಇದ್ದೆವು. ಬೆಳಗಿನ ಹತ್ತುಗಂಟೆಯಿಂದ ಸಂಜೆ 6ರವರೆಗೆ ಬ್ಯಾನರ್‌ಗಳನ್ನು ಹಿಡಿದು, ಘೋಷಣೆಗಳನ್ನು ಕೂಗುತ್ತಾ ನಮ್ಮ ಹೋರಾಟ ನಡೆದಿತ್ತು. ಪೊಲೀಸರು ನಮ್ಮನ್ನು ಸುತ್ತುವರೆದರು. ಅಕ್ಷರಶಃ ಗೋಡೆಯಂತೆ ಸುತ್ತುವರಿದರು. ಎತ್ತಂಗಡಿಯಾದ ಇನ್ನೂ ಮೂರು ಹಳ್ಳಿಯ ಜನರು ನಮ್ಮ ಜೊತೆ ಸೇರಿದರು. ಈ ಕಂಪನಿಯಿಂದ ಒಟ್ಟು 26 ಹಳ್ಳಿಗಳು ತೊಂದರೆ ಅನುಭವಿಸುತ್ತಿವೆ. ಗಣಿಯೋಜನೆಯ ವಿರುದ್ಧ ಜನರ ಧ್ವನಿ, ಶಕ್ತಿ ಅಧಿಕಗೊಂಡಂತೆ ಸಮಸ್ಯೆ ಜಟಿಲವಾಗುವುದೆಂಬುದು ಸರಕಾರಕ್ಕೆ ಗೊತ್ತಿದೆ. ಅದಕ್ಕಾಗಿ ಗರಿಷ್ಠ ಪ್ರಮಾಣದ ಬಲವನ್ನು ಬಳಸಲು ಪೊಲೀಸರಿಗೆ ತಾಕೀತು ನೀಡಲಾಗಿದೆ. ನಮ್ಮನ್ನು ನಿರಂತರವಾಗಿ ಹಿಂಸಿಸುತ್ತಾರೆ. ಸುಳ್ಳು ಮೊಕದ್ದಮೆಗಳನ್ನು ಹಾಕುತ್ತಾರೆ. ನಮ್ಮಲ್ಲಿ ಹಲವಾರು ಮಂದಿ ಭೂಗತರಾಗಿದ್ದೇವೆ. ಬೆಳಗಿನ ಸಮಯದಲ್ಲಿ ನಡೆದಾಡುವುದೂ ಇಲ್ಲ. ಇದರಿಂದಾಗಿ ರಾತ್ರಿಯ ಹೊತ್ತಿನಲ್ಲಿ ಅರಣ್ಯದ ಒಳಭಾಗಗಳಿಂದ ತಲುಪಬೇಕಾದ ಸ್ಥಳಗಳನ್ನು ತಲುಪುತ್ತೇವೆ. ಬದುಕು ಅತ್ಯಂತ ದುಸ್ತರವಾಗುತ್ತಿದೆ. ಕಂಪನಿಯವರು ನಮ್ಮ ಶಾಂತಿಯುತ ಸಭೆಗಳಲ್ಲಿ ಅಮಾನುಷವಾಗಿ ವರ್ತಿಸಲು, ಭಂಗ ಪಡಿಸಲು 'ಗೂಂಡಾ'ಗಳನ್ನು ಕಳುಹಿಸುತ್ತಾರೆ. ನಾವು ವಿರೋಧಿಸಿದರೆ, ನಮ್ಮ ಮೇಲೆ ಕಂಪನಿ ಅಧಿಕಾರಿಗಳ ಮೇಲೆ ಹಲ್ಲೆ ಮಾಡಿದ್ದೇವೆ. ಸಾಯಿಸಿದ್ದೇವೆ, ಕಿಡ್ನ್ಯಾಪ್ ಮಾಡಿದ್ದೇವೆ ಎಂದು ಕೇಸು ಹಾಕುತ್ತಾರೆ. ಆದರೆ, ಇದ್ಯಾವುದೂ ನಮ್ಮ ಧೃತಿಗೆಡಿಸಿಲ್ಲ, ಧೃತಿಗೆಡಿಸುವುದೂ ಇಲ್ಲ.

"ಒಮ್ಮೆ ನಾವು 'ಗೌಡಗುಡ' ಹಳ್ಳಿಯ ಪಂಚಾಯಿತಿ ಕಛೇರಿಯನ್ನು ಘೇರಾವ್ ಮಾಡಿದೆವು. ಸಾರ್ವಜನಿಕ ವ್ಯವಸ್ಥೆ, ಆರೋಗ್ಯ, ಜೀವನೋಪಾಯ ಯೋಜನೆಗಳು, ಎತ್ತಂಗಡಿಯಾದವರಿಗೆ ಪುನರ್ವಸತಿಯ ಸರಕಾರಿ ಯೋಜನೆಗಳು ಹೀಗೆ ದೊಡ್ಡ ಬೇಡಿಕೆಗಳ ಈಡೇರಿಕೆಗೆ ಆಗ್ರಹಪಡಿಸಿದೆವು. ಇದರ ಮೂಲ ಉದ್ದೇಶ ಭಯದಿಂದ ಚಳವಳಿಯಲ್ಲಿ ಭಾಗಿಯಾಗದೇ ಉಳಿದವರು ಭಾಗಿಯಾಗಲಿ ಎಂಬುದು ಮತ್ತು ಗ್ರಾಮಸ್ಥರು ಅನುಭವಿಸುವ ನೋವು, ಹತಾಶೆಗಳನ್ನು ಎತ್ತಿಹಿಡಿಯುವುದು. ಹೇಗಾದರೂ ಮಾಡಿ ನಮ್ಮ ಹೋರಾಟ ನಿಲ್ಲಬಾರದು ಅದಕ್ಕಾಗಿ ಈ ಎಲ್ಲ ಬೇಡಿಕೆಗಳನ್ನು ಮುಂದಿಟ್ಟುಕೊಂಡು, ಬೃಹತ್‌ರ್ಯಾಲಿ ಸಂಘಟಿಸಿದೆವು. ನಮ್ಮ ಕ್ರಮಕ್ಕೆ ಪ್ರತಿಕ್ರಿಯಿಸುವಂತೆ, ಅಲ್ಲಿಯ ಕ್ಷೇತ್ರಾಧಿಕಾರಿಯು (ಬಿ.ಡಿ.ಓ) ಪಂಚಾಯಿತಿ ಅಧ್ಯಕ್ಷರಿಗೆ ಪಡಿತರ ವಿತರಿಸುವಂತೆ ತನ್ಮೂಲಕ ಚಳವಳಿಯನ್ನು ನಿಯಂತ್ರಿಸುವಂತೆ ಹೇಳಿದರು. ನಮ್ಮ ಗ್ರಾಮಸ್ಥರಿಗೆ ಉದ್ಯೋಗದಾಸೆ ಹುಟ್ಟಿಸಿ ವಿಭಜಿಸುವುದು ಅವರ ಕುತಂತ್ರ, ಆದರೆ ಹೋರಾಟ ಮುಂದುವರಿಯಲೇ ಬೇಕು. ಯಾಕೆಂದರೆ, ನಮ್ಮ ಮೂಲಭೂತ ಸ್ವಾತಂತ್ರ್ಯಕ್ಕೇ ಧಕ್ಕೆ ಇದೆ.

"ಪೊಲೀಸರ ತುಳಿತದ ಅಮಾನುಷತೆಯ ಮತ್ತೊಂದು ಮುಖ. ಇದು ನಡೆದದ್ದು 2000ನೇ ಇಸವಿಯಲ್ಲಿ. ಗಣಿಯೋಜನೆಯನ್ನು ಅನುಷ್ಠಾನಗೊಳಿಸಲು ಸರಕಾರ ನೀಡಿರುವ ಅನುಮತಿಯನ್ನು ವಿರೋಧಿಸಿ, ಶಾಂತ ಪ್ರತಿಭಟನೆಯನ್ನು ನಡೆಸಲು 'ಮೈಕಂಚ್' ಎನ್ನುವ ಸ್ಥಳದಲ್ಲಿ

### 'ಚಿಂಗಾರಿ' ಪ್ರಶಸ್ತಿಯ ಹಿನ್ನೆಲೆ:

*ಪ್ರತಿವರ್ಷ ಡಿಸೆಂಬರ್ 5ರಂದು ನೀಡುವ 'ಚಿಂಗಾರಿ' ಪ್ರಶಸ್ತಿ ಅನನ್ಯವಾದುದು. ಜಗತ್ತಿನ ಅತ್ಯಂತ ಹೀನಾಯ ಔದ್ಯೋಗಿಕ ದುರ್ಘಟನೆಯಲ್ಲಿ ಒಂದಾದ ಭೂಪಾಲ್ ಅನಿಲ ದುರಂತದಲ್ಲಿ ಬದುಕನ್ನು ಕಳೆದುಕೊಂಡು, ಅಂಗಾಂಗ ಹೀನರಾಗಿ, ನಿರ್ಗತಿಕರಾದವರಲ್ಲಿ 'ಚಂಪಾದೇವಿ ಶುಕ್ಲಾ' ಮತ್ತು 'ರಶೀದಾ ಬೀ' ಬದುಕುಳಿದ ದುರ್ದೈವಿಗಳು. ಇವರು ಇಂದು ದುರಂತಕ್ಕೀಡಾದ ಸಮುದಾಯದ ಮುಖಂಡರೂ ಹೌದು. ಅತ್ಯಂತ ಪ್ರಭಾವಿ, ಪ್ರಬಲ ಕಾರ್ಪೊರೇಷನ್‌ಗಳ ವಿರುದ್ಧ ಹೋರಾಡುವ, ಹೋರಾಡುತ್ತಿರುವ ಆದಿವಾಸಿಗಳು, ದಲಿತರು, ರೈತ ಮಹಿಳೆಯರನ್ನು ಪುರಸ್ಕರಿಸಬೇಕೆಂಬ ಅವರ ಕನಸಿನ ಕೂಸೇ 'ಚಿಂಗಾರಿ' ಪ್ರಶಸ್ತಿ.*

*ರಶೀದಾ ಬೀ ಮತ್ತು ಚಂಪಾದೇವಿ ಶುಕ್ಲಾ ಅವರು ಭಾರತ ಸರಕಾರ, ಯೂನಿಯನ್ ಕಾರ್ಬೈಡ್ ಹಾಗೂ ಅದರ ವಾರಸುದಾರ ಸಂಸ್ಥೆಯಾದ 'ಡೌ ಕೆಮಿಕಲ್ಸ್' ವಿರುದ್ಧ ನಿರಂತರವಾಗಿ ನಡೆಸಿದ ಹೋರಾಟಕ್ಕಾಗಿ ಸಂದ 1,25,000 ಡಾಲರ್ ಮೊತ್ತದ 'ಗೋಲ್ಡ್‌ಮ್ಯಾನ್ ಎನ್‌ವಿರಾನ್‌ಮೆಂಟಲ್' ಬಹುಮಾನದ ಹಣವನ್ನು ಬಳಸಿಕೊಂಡು "ಚಿಂಗಾರಿ ದತ್ತಿ"ಯನ್ನು 2004ರಲ್ಲಿ ಸ್ಥಾಪಿಸಿದರು. ಈ ಪ್ರಶಸ್ತಿಯು ಕಾರ್ಪೊರೇಟ್ ನೇತೃತ್ವದ ಜಾಗತೀಕರಣವನ್ನು ವಿರೋಧಿಸಿ, ಅದರ ದುರಂತವನ್ನು ಬಹಿರಂಗಗೊಳಿಸುವ ಮಹಿಳೆಯರಿಗೆ ಮೀಸಲಾಗಿದೆ.*

*ಈ ವಿಶೇಷ ಪ್ರಶಸ್ತಿ ಗೌರವ ಮುಕ್ತಜೋಡಿಯಾಗೆ ಲಭಿಸಿದೆ*

ನಾವೆಲ್ಲ ಸಭೆ ಸೇರಲು ಯೋಜಿಸಿದ್ದೆವು. ಪೊಲೀಸರು ತಡೆದರು. ಈ ಘರ್ಷಣೆಯಲ್ಲಿ ಪೊಲೀಸರು ಗುಂಡು ಹಾರಿಸಿದರು. ಮೂರು ಅಮಾಯಕ ಗಿರಿಜನರು ಸ್ಥಳದಲ್ಲಿಯೇ ಪ್ರಾಣಬಿಟ್ಟರು. ನಾನು, ನನ್ನ ಸಹಪಾಠಿಗಳು ಅಲ್ಲಿಯೇ ಉಳಿದು ಪೊಲೀಸರ ಅಮಾನವೀಯ ಕೃತ್ಯವನ್ನು ವಿರೋಧಿಸಿದೆವು ಮೃತರ ದೇಹಗಳನ್ನು ಹಿಂಪಡೆದು ತಂದೆವು.

"ನಮ್ಮ ಮುಂದಾಳುಗಳ ಸುಳಿವು ನೀಡುವಂತೆ ಒತ್ತಾಯಿಸುತ್ತಿದ್ದ ಪೊಲೀಸರ ಮಾತುಗಳನ್ನು ತಿರಸ್ಕರಿಸಿದ್ದು ಅವರ ಅಮಾನುಷ ವರ್ತನೆಗೆ ಕಾರಣ. ಅವರೆಲ್ಲ ಸಶಸ್ತ್ರಧಾರಿಗಳಾಗಿದ್ದಾರೆ. ಮಹಿಳೆಯರನ್ನು ಮಾನಭಂಗ ಮಾಡುತ್ತೇವೆ ಎಂದು ಬೆದರಿಕೆ, ಹಾಗೆಯೇ ದುರ್ಬಲರಾದ ಮುದುಕರನ್ನು, ಮಕ್ಕಳನ್ನು, ಮಹಿಳೆಯರನ್ನು ಕೊಂದು ಹಾಕುವ ಬೆದರಿಕೆ ಹಾಕಿದರು. ಆದರೆ, ನಮ್ಮ ಒಗ್ಗಟ್ಟಿಗೆ ಈ ಯಾವ ಬೆದರಿಕೆಗಳು ಪ್ರಭಾವ ಬೀರಲಿಲ್ಲ. ಕೆಲದಿನಗಳ ನಂತರ, ಮುಂದಿನ ಕ್ರಿಯಾ ಯೋಜನೆಯನ್ನು ರೂಪಿಸಲು ಸಾವಿರಾರು ಮಂದಿ ಸೇರಿದೆವು. ಜನರು ಭಯಭೀತರಾಗಿದ್ದರು. ಅದಕ್ಕಾಗಿ ಅವರಲ್ಲಿ ಧೈರ್ಯ, ವಿಶ್ವಾಸ ತುಂಬಲು ತುಂಬಿದ ಸಭೆಯಲ್ಲಿ ನಾನು ಮಾತನಾಡಿದೆ.

"ನಮ್ಮ ಹೋರಾಟಗಳೇ ನನ್ನ ಸ್ಫೂರ್ತಿಯ ಸೆಲೆ. ನನಗೆ ನನ್ನ ತಂದೆಯ ಹಳ್ಳಿ ಇನ್ನೂ ನೆನಪಿದೆ. ಅವರನ್ನು ಆ ಹಳ್ಳಿಯಿಂದ ಎತ್ತಂಗಡಿ ಮಾಡಿದರು. ತಂದೆಯ ಸಹೋದರ, ಸಹೋದರಿಯರು ಅನಿವಾರ್ಯವಾಗಿ ಹಳ್ಳಿಯಿಂದ ಹೊರ ಹೊರಡಬೇಕಾಯಿತು. ಅಲ್ಲಿಂದ ಇಲ್ಲಿಯವರೆಗೂ ಅಂದರೆ ಸುಮಾರು 15 ವರ್ಷವಾದರೂ ಅವರನ್ನು ಭೇಟಿಯಾಗಲಿಕ್ಕಾಗಿಲ್ಲ. ಈ ಅಗಲಿಕೆ, ನೋವು, ನನ್ನ ಹೋರಾಟದ ಮನೋಭಾವಕ್ಕೆ ಪುಷ್ಟಿ ನೀಡುತ್ತವೆ. ನನ್ನ ಭೂಮಿಯನ್ನು ಹರಣ ಮಾಡಿದ್ದಾರೆ, ಬದುಕನ್ನು ಹರಿದು ಹಂಚಿದ್ದಾರೆ. ಪರಿಹಾರ ರೂಪದಲ್ಲಿ ಹಣ ನೀಡುವುದು ಸಾಕೇ? ಹಣ ಒಂದಲ್ಲ ಒಂದು ದಿನ ತೀರಿಬಿಡುತ್ತದೆ. ಆದರೆ, ಈ ನನ್ನ ನೆಲ ನಿರಂತರ. ಇದು ನನ್ನ ಸಹಜ ಆಸ್ತಿ. ವರ್ಷದ ಹನ್ನೆರಡು ತಿಂಗಳು ಗಿರಿಜನ ಹಬ್ಬಗಳಿವೆ. ಆದರೆ ಹೊರಗಿನವರ ನಿರಂತರ ಆಕ್ರಮಣ, ನಮ್ಮ ನೆಲೆಯಿಂದ ಪ್ರತ್ಯೇಕೀಕರಣ ಕ್ರಮೇಣ ಎಲ್ಲವನ್ನೂ ಮಾಯವಾಗಿಸುತ್ತಿದೆ. ಅದಕ್ಕಾಗಿಯೇ ನಾನು ಹೋರಾಟವನ್ನು ಬಿಡುವುದಿಲ್ಲ, ನಿಲ್ಲಿಸುವುದಿಲ್ಲ. ನನಗೆ ಭಯವೆಂಬುದಿಲ್ಲ. ನನ್ನ ಕೋಪ, ದುಃಖ ಹರಿಯುತ್ತಿದೆ. ನಮ್ಮ ಹೋರಾಟದ ಒಂದು ಸಣ್ಣ ಯಶಸ್ಸು ನನ್ನನ್ನು ಸಂತೋಷಿಯನ್ನಾಗಿ ಮಾಡುತ್ತದೆ. ನಾನು ನನ್ನ 'ಬೀಟಾ ಮಾಡಿ' (ತಾಯ್ನೆಲ)ಗಾಗಿ ಪ್ರಾಣ ಕೊಡಲೂ ಸಿದ್ಧ. ಯಾಕೆಂದರೆ, ಇದು ನನ್ನ ಆಸ್ತಿ, ನನ್ನ ಹಕ್ಕು. ಈ ಬೆಟ್ಟ, ಕಾಡು, ನದಿಗಳಿಗಾಗಿ ನಾನು ಏನೇ ಬಂದರೂ ಎದುರಿಸುತ್ತೇನೆ."

ಈ ಹೋರಾಟ ಇನ್ನೂ ನಡೆಯುತ್ತಲೇ ಇದೆ. ದಿನಂಪ್ರತಿ ಕಂಪನಿ, ಕಂಪನಿಯ ಬೆನ್ನಿಗಿರುವ ಸರಕಾರ ಮುಗ್ಧ ಗಿರಿಜನರನ್ನು ಅತ್ಯಂತ ಹೀನಾಯವಾಗಿ ಕಾಣುತ್ತಿದೆ. ಮುಕ್ತಜೋಡಿಯಾರಂತಹ ನೂರಾರು ಮಹಿಳೆಯರು, ತೊಂದರೆಗೀಡಾಗಿರುವ ಹಳ್ಳಿಯ ಜನರು ಧೃತಿಗೆಡದೆ ತಮ್ಮ ನಿಲುವನ್ನು ಭದ್ರಗೊಳಿಸುತ್ತಲೇ ಇದ್ದಾರೆ. ❑

*"ರಾಮ-ಭೀಮ ಯಾವ ದೇವರಿಗೂ ನನ್ನನ್ನು ಹೋಲಿಸಬೇಡ. ಹದಿನಾಲ್ಕು ವರ್ಷ ವನವಾಸದಲ್ಲಿ ಗಂಡನ ನೆರಳಾಗಿ ನಾನಾ ಕಷ್ಟಗಳನ್ನು ಅನುಭವಿಸಿದ ಸೀತೆಗೆ ಅಗ್ನಿಪರೀಕ್ಷೆ ವಿಧಿಸಿದ ರಾಮನಿಗೆ ನನ್ನನ್ನು ಹೋಲಿಸಬೇಡ. ಕಂತ್ರಿ ಅಗಸನ ಮಾತನ್ನು ನಂಬಿ ತುಂಬು ಗರ್ಭಿಣಿಯನ್ನು ನಿಷ್ಕರುಣೆಯಿಂದ ಅಡವಿಗಟ್ಟಿದ ಆ ರಾಮನಿಗೆ ನಿಜವಾಗಿ ಸೀತೆಯಲ್ಲಿ ಪ್ರೇಮವಿತ್ತೆ? ನಂಬಿಕೆ ಇತ್ತೆ?"*

*-ಎಂ. ಕೆ. ಇಂದಿರಾ (ಗುಂಡ-ಪು. ೨೧೧)*

## ಹೆಣ್ಣು

ಇದೇ ದಾರಿ ನಿನ್ನದು
ತಗ್ಗು ದಿನ್ನೆಗಳಿವೆ ಎಚ್ಚರ
ಸೂರ್ಯನ ಕೆಂಗಣ್ಣ ನೋಟವಿದೆ
ಚಿಂತಿಸಬೇಡ, ಇಕ್ಕೆಲಗಳಲ್ಲಿ
ಗಿಡಮರಗಳಿಲ್ಲ ಆದರೇನಂತೆ?
ಸಿಮೆಂಟಿನ ದಾರಿಯಲ್ಲ
ನಯವಾದ ಡಾಂಬರ ರೋಡಲ್ಲ
ಬಿಸಿ ಉಸಿರು ಹಾಕದಿರು
ನಿನ್ನ ನಿಲುಗಡೆಗೆ ಅಲ್ಲ ಅದು
ಬಂಡೆಗಲ್ಲಿಂದ ಧುಮುಕಿದಾಗಲೇ
ಸುಂದರ ಜಲಪಾತದ ನಿರ್ಮಾಣ
ಮೇರುವನ್ನೇರಿದವನೆ ವಿಜಯಿ
ನೀನು ಸವೆಸಬೇಕು ನಿನ್ನ ದಾರಿ
ತಿಂಗಳಿಗೊಮ್ಮೆ ಹುಣ್ಣಿಮೆ ಚಂದಿರ
ಬರುವದಿಲ್ಲವೇ
ಬೆಳುದಿಂಗಳು ದಿನದಿನವಲ್ಲ ನಿನಗೆ
ಬಿಸಿನೀರು ಸಿಗದಿದ್ದರೆ
ಚಳಿಯನ್ನೆ ಹೊದ್ದುಕೊ
ಉಣಲಿಲ್ಲದಿದ್ದರೆ ನೀರು ಕುಡಿ
ಉಪವಾಸವಿರಬೇಡ
ಕಲ್ಲು ಮುಳ್ಳುಗಳೊ ಕಳ್ಳಕಾಕರೊ
ಹುಲ್ಲುಗಾವಲಿರಬಹುದೇನೋ ಮುಂದೆ
ಇಬ್ಬನಿ ಬಿಂದುಗಳ ಹಸನ್ಮುಖ
ಕರಗಿ ಹೋದೀತು ನಿನ್ನ ಬಿಸಿಲುಸಿರಿಗೆ
ಮೆಲ್ಲಮೆಲ್ಲನೆ
ಬಾಣಗಳು ಬರಬಹುದು
ಎದೆಗೆ ನಾಟಬಹುದು
ಕಿತ್ತಲೆ ಬೇಕು, ಎತ್ತಬೇಕು ಒಂದು ಹಿಡಿ
ನಗುವ ಬಿತ್ತಬೇಕು ಸುತ್ತಲೂ
ಅತ್ತರೆ ಕೇಳುವವರಿಲ್ಲ
ಕಿವುಡಾಗಬೇಕು
ನೀ ನಡೆವ ದಾರಿ ಹಸನಾದೀತು ಎಂದು
ಬಂದೀತು
ಎಂದಾದರೊಂದು ದಿನ
ಒಂದು ಹಸಿರೆಲೆ
ಒಂದು ಹೂ
ಒಂದು ಹಣ್ಣು
ದಾರಿ ನೋಡಬೇಕು

● *ದಾಕ್ಷಾಯಣಿ ಯಡಹಳ್ಳಿ*

# "ಇನ್ಸಾನ್ ಹೈ ಹಮ್" - ಚಾರುಲ್ ಮತ್ತು ವಿನಯ್ ಮಹಾಜನ್ ಅವರೊಂದಿಗೆ ಒಂದು ಸಂಜೆ

● *ನೀಲಾಂಜನ ಬಿಸ್ವಾಸ್*



*ಮಂದಿರ್ ಮಸ್ಜಿದ್ ಗಿರಿಜಾಘರ್‌ನೆ ಬಾಂಟ್ ದಿಯಾ ಭಗವಾನ್ ಕೋ।*
*ಧರತೀ ಬಾಂಟೀ ಸಾಗರ್ ಬಾಂಟಾ ಮತ್ ಬಾಂಟೋ ಇನ್ಸಾನ್ ಕೋ॥*
*[ಮಂದಿರ, ಮಸೀದಿ, ಚರ್ಚುಗಳು ಹಂಚಿಹಾಕಿವೆ ಭಗವಂತನ.*
*ಭೂಮಿ ಹಂಚಿದೆ, ಸಾಗರ ಹಂಚಿದೆ... ಹಂಚಬೇಡಿರೊ ಮಾನವನ]*

"ಮಂದಿರ್ ಮಸ್ಜಿದ್ ಗಿರಿಜಾಘರ್" ಎಂಬ ಹಾಡನ್ನು ದೇಶದ ಅನೇಕ ಕಡೆಗಳಲ್ಲಿ ಕೋಮುವಾದ ವಿರೋಧಿ ನಾಡಗೀತೆಯ ಹಾಗೆ ಪ್ರತಿಭಟನಾ ರ್‍ಯಾಲಿಗಳಲ್ಲಿ, ಸಭೆಗಳಲ್ಲಿ ಹಾಡಲಾಗುತ್ತಿದೆ. ಆದರೆ ಈ ಹಾಡನ್ನು ಬರೆದದ್ದು ಇನ್ನೂ ಹದಿಹರೆಯದ ಒಬ್ಬ ಯುವ ವಿದ್ಯಾರ್ಥಿ, ಇಪ್ಪತ್ತು ವರ್ಷಗಳ ಹಿಂದೆ ಎಂಬ ಸಂಗತಿ ಬಹುಮಂದಿಗೆ ತಿಳಿದಿಲ್ಲ.

1985ರಲ್ಲಿ ಕೃಷಿ ಇಂಜಿನಿಯರಿಂಗ್ ವಿದ್ಯಾರ್ಥಿಯಾಗಿದ್ದ ಪಂಜಾಬಿ ಯುವಕ ವಿನಯ್ ಮಹಾಜನ್ ಅಹಮದಾಬಾದಿನಲ್ಲಿರುವ ಭಾರತದ ಅತ್ಯಂತ ಪ್ರತಿಷ್ಠಿತ ಶಿಕ್ಷಣಸಂಸ್ಥೆ ಆದ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್[IIM] ನಲ್ಲಿ ಕಲಿಯುತ್ತಿದ್ದರು. ಆಗಲೇ ಅತ್ಯಂತ ಕ್ರೂರವಾದ ಕೋಮು ಹಿಂಸಾಚಾರಗಳು ಆ ನಗರದಲ್ಲಿ ಸ್ಫೋಟಗೊಂಡವು. "ನನ್ನ ಸುತ್ತಲೂ ನಡೆದ ಹಿಂಸಾಚಾರ ಕಂಡು ನಾನು ದಿಗ್ಭ್ರಮೆಗೊಂಡಿದ್ದೆ" ಎನ್ನುತ್ತಾರೆ ವಿನಯ್. ಆಗ ಅವರು ಅನುಭವಿಸಿದ ಆಳವಾದ ವ್ಯಥೆ, ಆತಂಕ, ಕೋಪಗಳಿಂದ ಹೊಮ್ಮಿಬಂದ ಹಾಡು ಅದು. ಕೋಮು ವೈಷಮ್ಯದ ಹಿಂಸಾಚಾರದ ಸತ್ಯಗಳನ್ನು ಸರಳವಾಗಿ ಪ್ರಾಮಾಣಿಕವಾಗಿ ಬಿತ್ತರಿಸುವ ಆ ಹಾಡು ಎಲ್ಲ ಕೇಳುಗರ ಮನದಲ್ಲಿ ಮಾರ್ದನಿಸುತ್ತದೆ.

ಇತ್ತೀಚೆಗೆ, ಅಕ್ಟೋಬರ್ ತಿಂಗಳ ಒಂದು ತಂಪಾದ ಸಂಜೆ, ವಿನಯ್ ಮಹಾಜನ್ ಮತ್ತು ಅವರ ಪತ್ನಿ ಚಾರುಲ್ ಭರವಾಡ ಅವರು ಬೆಂಗಳೂರಿನಲ್ಲಿ ನಡೆಸಿಕೊಟ್ಟ ಒಂದು ಕಾರ್ಯಕ್ರಮ "ಇನ್ಸಾನ್ ಹೈ ಹಮ್". ಅದರಲ್ಲಿ 'ಮಂದಿರ್ ಮಸ್ಜಿದ್' ಮಾತ್ರವಲ್ಲದೆ ವಿನಯ್ ಅವರದೇ ಇನ್ನೂ ಹಲವು ರಚನೆಗಳನ್ನು ಅವರಿಬ್ಬರದೇ ರಾಗ ಸಂಯೋಜನೆಯೊಂದಿಗೆ ಕಿಕ್ಕಿರಿದ ಸಭೆಯಲ್ಲಿ ಅವರು ಹಾಡಿದರು. ಆ ಹಾಡುಗಳ ಮಧುರ ನಾದವು ಭಾವನೆಗಳನ್ನು ಮೀಟಿ ಕೇಳುಗರ ಮನ ಮಿಡಿಸುವಂತಿತ್ತು.

ಆರಂಭದಲ್ಲಿ, ತಮ್ಮ ಆ ಶೀರ್ಷಿಕೆ ಕವನದ ಪರಿಚಯ ಮಾಡಿಕೊಡುತ್ತಾ ವಿನಯ್ ಹೇಳಿದರು: "ನಾವು ಮಂಗಳಗ್ರಹಕ್ಕೆ ಆಕಾಶನೌಕೆಗಳನ್ನು ಕಳುಹಿಸಲು ದಶಕೋಟಿಗಟ್ಟಲೆ ಹಣವನ್ನು ವ್ಯಯಿಸಿ. ಅಲ್ಲಿ ಏನಾದರೂ ಜೀವದ ಸುಳಿವು ಇದೆಯೇ ಎಂದು ಹುಡುಕುತ್ತೇವೆ. ಆದರೆ ನಮ್ಮ ಈ ಹಸಿರುಗ್ರಹದಲ್ಲಿ ಈಗಾಗಲೇ ಅಸ್ತಿತ್ವದಲ್ಲಿರುವ ಜೀವಗಳಿಗೆ ನಾವು ಮಾಡುತ್ತಿರುವುದೇನು? ಅಣ್ವಸ್ತ್ರಗಳ ಮೂಲಕ ಅವನ್ನು ನಾಶಮಾಡುತ್ತೇವೆ; ರಾಸಾಯನಿಕ ವಸ್ತುಗಳ ವಿಷವುಣಿಸುತ್ತೇವೆ: ಆತ್ಮ ಘಾತುಕತನದ ಹೊಸ ಹೊಸ ವಿಧಾನಗಳನ್ನೂ ಸೃಷ್ಟಿಸುತ್ತೇವೆ. ನಾವು ಮನುಷ್ಯರು ಎಂಬುದನ್ನು ಮರತೇ ಬಿಟ್ಟಂತಿದ್ದೇವೆ. ನಾವು ಮನುಷ್ಯರು 'ಇನ್ಸಾನ್ ಹೈ ಹಮ್'."

**ಯಹೂದಿ ಹೈ, ಬುದ್ಧ್‌ಹೈ, ಜೈನ್ ಹೈ, ಆಸ್ತಿಕ್ ಯಾ ನಾಸ್ತಿಕ್**
**ಹೈ ಹಮ್।**
**ಚಾರ್ ಹೋ ಯಾ ಹಜಾರ್ ಹೋ ಮಿಲ್ ಕೇ ಕಹೇ**
**ಇನ್ಸಾನ್ ಹೈ ಹಮ್॥**

[ಯಹೂದ್ಯರಿರಲಿ, ಬೌದ್ಧರಿರಲಿ, ಜೈನರಿರಲಿ, ನಾವು ಆಸ್ತಿಕರಿರಲಿ, ಇಲ್ಲವೇ ನಾಸ್ತಿಕರೇ ಇರಲಿ, ನಾಲ್ವರಿರಲಿ, ಸಾವಿರವೇ ಇರಲಿ ಒಟ್ಟಾಗಿ ಹೇಳೋಣ 'ನಾವು ಮಾನವರು' ಎಂದು]

ಈ ಶಬ್ದಗಳು ತೀರ ಸರಳವೆಂದು ತೋರಬಹುದು. ಆದರೆ ಚಾರುಲ್ ಮತ್ತು ವಿನಯ್ ಈ ಗೀತೆಯನ್ನು ಬರೆದ ಸಂದರ್ಭವನ್ನು ನೆನಪಿಸಿಕೊಂಡರೆ ಅವೇ ಶಬ್ದಗಳು ತುಂಬ ಗಹನವಾದ ಧ್ವನಿ ಪಡೆದುಕೊಳ್ಳುತ್ತವೆ. ಏಕೆಂದರೆ ಈ ದಂಪತಿಗಳು ನೆಲೆಸಿರುವ ಜಾಗ ಹಿಂದೂತ್ವದ ಪ್ರಯೋಗಾಲಯದಂತಿರುವ ಗುಜರಾತು. ಅಲ್ಲಿ ಸಂಘ ಪರಿವಾರದವರು ನಡೆಸಿಕೊಂಡು ಬರುತ್ತಿರುವ ದ್ವೇಷದ ರಾಜಕೀಯದ ವಿರುದ್ಧ ನೇರವಾಗಿ ಪ್ರತಿಭಟಿಸುತ್ತವೆ ಈ ನುಡಿಗಳು.

ಅವರೆನ್ನುತ್ತಾರೆ, "ಗುಜರಾತಿನಲ್ಲಿ ವಾಸಮಾಡುವುದೆಂದರೆ ಸುಲಭ ವೇನಲ್ಲ. ಆ ರಾಜ್ಯದ ವಾತಾವರಣ ತುಂಬ ಕೆಟ್ಟುಹೋಗಿದೆ. ಕ್ರಿಶ್ಚಿಯನ್ನರ ಮೇಲೆ ವ್ಯವಸ್ಥಿತವಾಗಿ ಆಕ್ರಮಣಗಳು ನಡೆದಿವೆ; ಮುಸ್ಲಿಮರ ಮಕ್ಕಳಿಗೆ ಶಾಲೆಗಳಲ್ಲಿ ಪ್ರವೇಶ ನಿರಾಕರಿಸಲಾಗುತ್ತದೆ. ಶಾಲಾ ಪರೀಕ್ಷೆಗಳನ್ನು ಬೇಕೆಂದೇ ಈದ್ ಇಲ್ಲವೇ ಗುಡ್‌ಫ್ರೈಡೇಗಳಂದು ನಿಗದಿ ಪಡಿಸುವ ಮೂಲಕ ಕೋಮು ಪೂರ್ವಾಗ್ರಹವನ್ನು ಕಾಪಾಡಲಾಗುತ್ತಿದೆ."

ಹೀಗೆ ದಿನೇ ದಿನೇ ವಿಷವೇರುತ್ತಿರುವ ಆ ರಾಜ್ಯದ ವಾತಾವರಣವನ್ನು ತಡೆಯಲಾರದೆ ಅವರು ಹಲವು ಸಲ ಗುಜರಾತನ್ನು ತೊರೆದು ಬಿಡುವ ವಿಚಾರ ಮಾಡಿದ್ದುಂಟು. ಆದರೆ ಪ್ರತಿಬಾರಿಯೂ ಅವರು ತಮ್ಮ ನಿರ್ಧಾರವನ್ನು ತಡೆಹಿಡಿದಿದ್ದಾರೆ "ಹಾಗೆ ಬಿಟ್ಟು ಹೊರಟುಹೋಗುವುದು ಸುಲಭವಾದ ಆಯ್ಕೆ. ಆದರೆ ಅದಕ್ಕಿಂತ ಕಷ್ಟಕರ ಹಾಗೂ ಧೈರ್ಯದ ಸಂಗತಿ ಅಲ್ಲೇ ಉಳಿದು ಪ್ರತಿಭಟಿಸುವುದು" ಎನ್ನುತ್ತಾರೆ ಅವರು.

ಅವರ ಈ ಪ್ರತಿಭಟನೆಗಳು ಅನೇಕ ರೂಪಗಳಲ್ಲಿ ಪ್ರಕಟವಾಗಿವೆ. ಅವುಗಳಲ್ಲಿ ಕಾವ್ಯವನ್ನು ಒಂದು ಅಸ್ತ್ರವಾಗಿಸಿಕೊಂಡು 'ಲೋಕ್‌ನಾದ್' ಎಂಬ ಬ್ಯಾನರ್ ಅಡಿಯಲ್ಲಿ ಬೇರೆ ಬೇರೆ ಕಡೆ ಸಂಚರಿಸಿ ವಿವಿಧ ಸಮುದಾಯಗಳಿಗೆ ಹಾಡಿನ ಮೂಲಕ ವಿಚಾರ ತಲುಪಿಸುವುದೂ ಒಂದು ವಿಧಾನವಾಗಿದೆ. ನಗರಗಳ ವಿದ್ಯಾರ್ಥಿಗಳಿಂದ ಹಿಡಿದು ತೀರಾ ಬಡವರಾದ ಅರಣ್ಯವಾಸಿ ಬುಡಕಟ್ಟು ಜನಗಳು, ಮರುಭೂಮಿಯ ನಿವಾಸಿಗಳಂಥ ಹೊರಗಿನ ಸಮುದಾಯಗಳ ಹತ್ತಿರಕ್ಕೂ ಹೋಗಿ ಅವರು ಹಾಡಿದ್ದಾರೆ.

'ಅಭಿಗಮ್ ಕಲೆಕ್ಟಿವ್' ಎಂಬ ಬ್ಯಾನರ್‌ನ ಅಡಿಯಲ್ಲಿ ಹಲವಾರು ಸಾಮಾಜಿಕ ಸಂಶೋಧನೆಯ ಯೋಜನೆಗಳನ್ನು ನಡೆಸುತ್ತ ಬಂದಿದ್ದಾರೆ. ವಿನಯ್ ಒಬ್ಬ ಮ್ಯಾನೇಜ್‌ಮೆಂಟ್ ಪದವೀಧರ ಹಾಗೂ ಚಾರುಲ್ ತುಂಬ ಪ್ರತಿಭಾವಂತ ವಾಸ್ತುಶಿಲ್ಪಿ. ತಮ್ಮ ವೃತ್ತಿ ಸಂಬಂಧಿತ ಹಿನ್ನೆಲೆಗಳೊಂದಿಗೆ ಗಾಢವಾದ ಸಾಮಾಜಿಕ ಕಳಕಳಿ, ಬದ್ಧತೆ ಹಾಗೂ

ಕಲಾತ್ಮಕ ಮನಸ್ಸುಗಳನ್ನು ಬೆಸೆದು ಇವರಿಬ್ಬರೂ ನಡೆಸುತ್ತಿರುವ ಸಾಮಾಜಿಕ ಸಂಶೋಧನೆಗಳು ಬುದ್ಧಿ ಮತ್ತು ಹೃದಯಗಳೆರಡನ್ನೂ ಬೆಸೆಯಬಹುದಾದ ಬಗೆಗೆ ಪ್ರತಿನಿಧಿಗಳಾಗಿವೆ.

'ಮಾಲ್‌ಧಾರಿ' (ಪರಂಪರಾಗತವಾಗಿ ಒಂಟೆ ಮೇಯಿಸುವ ಜನಾಂಗ)ಗಳ ಬದುಕನ್ನು ಹಾಗೂ ಕಛ್ ಮತ್ತು ಸೌರಾಷ್ಟ್ರಗಳಲ್ಲಿ ಉಪ್ಪಿನ ಮಡುಗಳ ಕೆಲಸಗಾರ ಸಮುದಾಯವನ್ನು ಕುರಿತು ಇವರು ನಡೆಸಿರುವ ಸಂಶೋಧನೆಗಳು ಮಹತ್ವಪೂರ್ಣ ಸಾಮಾಜಿಕ ಅಧ್ಯಯನಗಳಾಗಿವೆ. ನೈಸರ್ಗಿಕ ಸಂಪನ್ಮೂಲಗಳನ್ನೇ ಅವಲಂಬಿಸಿ ಬದುಕಬೇಕಾದ ಈ ಸಮುದಾಯಗಳು ಎದುರಿಸುತ್ತಿರುವ ಹಲವು ಸಮಸ್ಯೆಗಳನ್ನು ಅವು ಬೆಳಕಿಗೆ ತಂದಿವೆ. ಭಾರತದಲ್ಲೇ ಅತಿ ವೇಗವಾಗಿ ಅಭಿವೃದ್ಧಿಗೊಳ್ಳುತ್ತಿರುವ ರಾಜ್ಯ ಗುಜರಾತು. ದೇಶದ ಒಟ್ಟು ಬಂಡವಾಳದ ಹೂಡಿಕೆಯ ನಾಲ್ಕನೇ ಒಂದು ಭಾಗ ಈ ರಾಜ್ಯವೇ ಪಡೆಯುತ್ತಿದೆ. ಅಲ್ಲಿ "ಅಭಿವೃದ್ಧಿ ಯೋಜನೆಗಳಿಗೆಂದು ಸಾಮಾನ್ಯ ಜಮೀನನ್ನು ಕಬಳಿಸುತ್ತಾ ಹೋದಂತೆ, ಗುಜರಾತಿನ ಕಡುಬಡವ ಸಮುದಾಯವಾದ ಮಾಲ್ಧಾರಿಗಳಂಥವರು, ಆ ಜಮೀನನ್ನೇ ಅವಲಂಬಿಸಿ ಬದುಕುವವರು, ತೀರಾ ನಿರ್ಗತಿಕರಾಗುತ್ತಿದ್ದಾರೆ" ಎಂದು ವಿನಯ್ ವಿವರಿಸುತ್ತಾರೆ.

ಯಾವುದೇ ಒಂದು ಸಮುದಾಯವನ್ನು ತಮ್ಮ ಸಂಶೋಧನೆಗೆಂದು ಆಯ್ಕೆ ಮಾಡಿಕೊಳ್ಳುವಾಗ ಚಾರುಲ್ ಮತ್ತು ವಿನಯ್ ಆ ಸಮುದಾಯದ ಸಮಸ್ಯೆ ಹೋರಾಟಗಳನ್ನೂ ತಮ್ಮದನ್ನಾಗಿ ಮಾಡಿಕೊಳ್ಳುತ್ತಾರೆ. ಅಂದರೆ ಅವರದು ಕೇವಲ ಮಾಹಿತಿ ಸಂಗ್ರಾಹಕರ ಕೆಲಸವಾಗಿರದೆ ಬದುಕಿನುದ್ದಕ್ಕೂ ಆ ಸಮುದಾಯದೊಂದಿಗೆ ಏರ್ಪಟ್ಟ ಸಂಬಂಧವಾಗುತ್ತದೆ. ಕೆಲವು ವರ್ಷಗಳ ಹಿಂದೆ ಅವರು ಮಾಲ್ಧಾರಿಗಳ ಬಗ್ಗೆ ಸಂಶೋಧನೆ ನಡೆಸುತ್ತಿದ್ದಾಗ ಮಾಲ್ಧಾರಿಗಳ ಒಂದು ನಿರ್ದಿಷ್ಟ ಸಮೂಹ ತೀವ್ರವಾಗಿ ಕಷ್ಟಕ್ಕೆ ಗುರಿಯಾಗಿದ್ದುದನ್ನು ಕಂಡರು. ಒಂದು ಕೈಗಾರಿಕಾ ಯೋಜನೆಗೆ ಅನುವು ಮಾಡಿಕೊಡುವುದಕ್ಕೆಂದು ಈ ಸಮುದಾಯದವರಿಗೆ ಒಂಟೆ ಮೇಯಿಸಲು ಭೋಗ್ಯವಾಗಿ ನೀಡಲಾಗಿದ್ದ ಹಲವಾರು ಹೆಕ್ಟೇರ್ ಜಮೀನಿನ ಭೋಗ್ಯವನ್ನು ರದ್ದುಪಡಿಸಲಾಗಿತ್ತು. ಚಾರುಲ್ ಮತ್ತು ವಿನಯ್ ತಕ್ಷಣ ಅಹಮದಾಬಾದಿಗೆ ಧಾವಿಸಿ, ಆ ಸಮುದಾಯದವರಿಂದ ಎಲ್ಲ ಅವಶ್ಯಕ ಮಾಹಿತಿಗಳನ್ನು ಸಂಗ್ರಹಿಸಿಕೊಂಡರು. ಮುಂದಿನ ಹಲವು ವಾರ, ತಿಂಗಳುಗಳ ಕಾಲ ಸರ್ಕಾರಿ ಅಧಿಕಾರಿಗಳ ಕಛೇರಿಗಳಲ್ಲಿ ಕಂಬದಿಂದ ಕಂಬಕ್ಕೆ ಅಲೆದು ಅಧಿಕಾರಿಗಳಿಗೂ ಪೀಡಿತ ಸಮುದಾಯಗಳಿಗೂ ಭೇಟಿಗೆ ಸಭೆಗಳನ್ನು ಏರ್ಪಾಡು ಮಾಡಲು ಶ್ರಮಿಸಿದರು. ಕೊನೆಗೆ ಮೇವಿಗಾಗಿ ನಿಗದಿಯಾದ ಜಮೀನಿನ ಭೋಗ್ಯದ ಒಪ್ಪಂದ ನವೀಕರಣದಲ್ಲಿ ಅವರು ಸಫಲರಾದರು. ಕೈಗಾರಿಕಾ ಯೋಜನೆಯನ್ನು ರದ್ದು ಮಾಡಲಾಯಿತು.

ತಮ್ಮ ಸಂಶೋಧನೆಯ ಸಂಬಂಧದಲ್ಲಿ ಹಳ್ಳಿಯಿಂದ ಹಳ್ಳಿಗೆ ಪ್ರಯಾಣ ಮಾಡುತ್ತಾ ವಿನಯ್ ಮತ್ತು ಚಾರುಲ್, ಹಾಡಿನ ವಿಶ್ವಭಾಷೆಯನ್ನು ಬಳಸಿಕೊಳ್ಳುತ್ತ ವಿವಿಧ ಸಮುದಾಯಗಳೊಂದಿಗೆ ಸ್ನೇಹದ ಬಂಧನ ಬೆಳೆಸಿಕೊಂಡಿದ್ದಾರೆ. ಚಾರುಲ್ ಹೇಳುತ್ತಾರೆ. "ಕಛ್ ಪ್ರದೇಶದಲ್ಲಿ ಹಿಂದು ಮತ್ತು ಇಸ್ಲಾಂಗಳ ಎರಡರ ಪರಂಪರೆಯ ಹಾಡುಗಳನ್ನೂ ಒಟ್ಟಾಗಿ ಹಾಡುವ ಅಲೆಮಾರಿ ಬುಡಕಟ್ಟುಗಳಿಗೆ ಸೇರಿದ ಬಡಜನರಲ್ಲಿರುವ ಧಾರ್ಮಿಕ ಸಮನ್ವಯದ ಶ್ರದ್ಧೆಯನ್ನು ಕಂಡು ನಮಗೆ ಗುಜರಾತಿನ ಬೇರೆಲ್ಲಾ ಭಾಗಗಳೂ ಕೋಮು ಹಿಂಸಾಚಾರದಲ್ಲಿ ಉರಿದು ಹೋಗುತ್ತಿರುವಾಗಲೂ ಕಛ್ ಮಾತ್ರ ಶಾಂತವಾಗಿತ್ತು ಎಂಬುದು ಖಾತ್ರಿಯಾಗಿದೆ. ಇಂದು 'ಅಭಿವೃದ್ಧಿ' ಎಂಬ ಹೆಸರಿನಲ್ಲಿ ಈ ಸಮುದಾಯಗಳ ಜೀವನೋಪಾಯಕ್ಕೆ ಇದ್ದ ತಳಹದಿಯನ್ನೇ ನಾಶಮಾಡಲಾಗುತ್ತಿದೆ. ಈ ಜನರನ್ನು ವ್ಯವಸ್ಥಿತವಾಗಿ ಸ್ಥಾನಾಂತರಗೊಳಿಸಲಾಗುತ್ತಿದೆ. ಇದು ಸೂಚಿಸುವ ಪರಿಣಾಮ ತುಂಬ ಅಪಾಯಕಾರಿ ಏಕೆಂದರೆ ಪರಂಪರಾಗತವಾಗಿ ಸಮನ್ವಯದಿಂದ ಬದುಕುತ್ತಿದ್ದ ಸಮಾಜಗಳನ್ನು ಇದು ಕೋಮುವಾದದ ದಳ್ಳುರಿಗೆ ತೆರೆದಿಡುತ್ತದೆ."




ಪಂಜಾಬಿನ ಗುರುದಾಸ್‌ಪುರದಲ್ಲಿ ಕಾಲೇಜಿನಲ್ಲಿ ಕಲಿಯುತ್ತಿದ್ದ ದಿನಗಳಿಂದಲೂ ವಿನಯ್ ಒಬ್ಬ ಕವಿಯಾಗಿದ್ದಾರೆ. ಚಾರುಲ್ ಮುಂಬಯಿಯಲ್ಲಿ ಬೆಳೆದುಬಂದ ಒಬ್ಬ ಗುಜರಾತಿ ಯುವತಿ. ಹಾಡುವುದೆಂದರೆ ಅವರಿಗೆ ಯಾವತ್ತೂ ಪ್ರಿಯವಾದದ್ದು. ವಿನಯ್ ಹೇಳುವಂತೆ "1989ರಲ್ಲಿ ಚಾರುಲ್ ಮತ್ತು ನಾನು ಮದುವೆಯಾದೆವು. ಆಮೇಲೆಯೇ ನಾವು ಅನೇಕ ಸಲ ಒಟ್ಟಿಗೇ ಹಾಡುಗಳನ್ನು ಬರೆದು ಹಾಡತೊಡಗಿದ್ದು." ಆ ಕಾಲಕ್ಕೆ ಇವರಿಬ್ಬರೂ ಕಾರ್ಪೊರೇಟ್ ಉದ್ಯೋಗಗಳಲ್ಲಿದ್ದರು. ಆದರೆ 1992ರಲ್ಲಿ ಬಾಬ್ರಿಮಸೀದಿಯನ್ನು ಕೆಡವಿದ ಘಟನೆಯ ನಂತರ 1993ರಲ್ಲಿ ಇಬ್ಬರೂ ತಮ್ಮ ಕೆಲಸಗಳನ್ನು ಬಿಟ್ಟು ಹಾಡುಗಾರಿಕೆಯನ್ನೇ ಮಾಧ್ಯಮವಾಗಿ ಮಾಡಿಕೊಂಡು ತಮ್ಮ ಸರ್ವಶಕ್ತಿಯನ್ನು ಜನಜಾಗೃತಿಗಾಗಿ ಬಳಸತೊಡಗಿದರು.

ಚಾರುಲ್ ಆಗಲಿ ವಿನಯ್ ಆಗಲಿ ಹಾಡುವ ಪ್ರತಿಭೆ ಇದ್ದರೂ, ಶಾಸ್ತ್ರೀಯವಾಗಿ ಸಂಗೀತವನ್ನು ಕಲಿತವರಲ್ಲ. ಹಿಂದಿ, ಗುಜರಾತಿ ಮತ್ತು ಪಂಜಾಬಿ ಭಾಷೆಗಳಲ್ಲಿ ಬರೆದ ಅವರ ಹಾಡುಗಳು ಹೃದಯದಿಂದ ನೇರವಾಗಿ ಹೊಮ್ಮಿ ಬಂದಂಥವು. ಕೇಳುಗರ ಹೃದಯಗಳನ್ನು ಮುಟ್ಟುವಲ್ಲಿ ಅವು ಎಂದೂ ವಿಫಲವಾಗುವುದಿಲ್ಲ. ಕಳೆದ 18 ವರ್ಷಕ್ಕಿಂತ ಹೆಚ್ಚು ಕಾಲದಿಂದ 'ಲೋಕನಾದ್' ಬ್ಯಾನರ್‌ನ ಅಡಿಯಲ್ಲಿ ಅವರು ಸುಮಾರು 50 ಹಾಡುಗಳನ್ನು ರಚಿಸಿದ್ದಾರೆ. ಎರಡು ಆಡಿಯೋ ಆಲ್ಬಂಗಳನ್ನು ಹೊರತಂದಿದ್ದಾರೆ. 'ಇನ್ಸಾನ್ ಹೈ ಹಮ್' ಹಾಡುಗಳ ಸಂಕಲನವನ್ನು ನೆರೆಯ ರಾಜ್ಯಗಳ ನೂರಾರು ಶಾಲಾ ಕಾಲೇಜುಗಳ ವಿದ್ಯಾರ್ಥಿಗಳ ಬಳಿಗೆ ಕೊಂಡೊಯ್ದಿದ್ದಾರೆ. ಆ ಹಾಡುಗಳು ಅನೇಕ ಪ್ರಮುಖ ಹೋರಾಟಗಳಿಗೆ ಶಕ್ತಿ ನೀಡಿವೆ. ಉದಾಹರಣೆಗೆ "ಜಾನ್‌ನೇಕಾ ಹಕ್" ಎಂಬ ಹಾಡು ಮಾಹಿತಿ ಹಕ್ಕನ್ನು ಕುರಿತ ಪ್ರಚಾರ ಗೀತೆಯಾಗಿ ಬಳಕೆಯಾಗಿದ್ದು ಎಷ್ಟು ಪ್ರಭಾವ ಬೀರಿತೆಂದರೆ ಮಾಹಿತಿ ಹಕ್ಕಿನ ಕಾನೂನು [RTI] ಎಂಬ ಚರಿತ್ರಾರ್ಹ ಕಾನೂನು ಜಾರಿಗೆ ಬರುವಂತಾಯಿತು. ನಿಜವೆಂದರೆ ಆ ಹಾಡು ಮಾಹಿತಿ ಹಕ್ಕು ಚಳವಳಿಯ ಚೈತನ್ಯವನ್ನು ಒಂದು ಆಧ್ಯಾತ್ಮಿಕ ಸ್ತರಕ್ಕೆ ಏರಿಸಿದೆ.

*ಮೇರೆ ಸಪನೋಂ ಕೋ ಯಹ ಜಾನ್‌ನೇ ಕಾ ಹಕ್ ಹೈ*
*ಕ್ಯೋ ಸದಿಯೋಂಸೆ ಟೂಟ್ ರಹೇ ಹೈ?*
*ಇನ್ಹೇ ಸಜನೇ ಕಾ ನಾಮ್ ನಹೀ ಹೈ*

*(ನನ್ನ ಕನಸುಗಳಿಗೆ ಇದೆ ಇದನ್ನು ತಿಳಿಯುವ ಹಕ್ಕು.*
*ಯುಗ ಯುಗಗಳಿಂದಲೂ ಏಕೆ ಅವು ಮುರಿದು ಬೀಳುತ್ತಿವೆ?*
*ಏಕೆ ಅವು ಎಂದೂ ಫಲ ಕೊಡಲಾರವು?)*

ಇನ್ನೊಂದು ಹಾಡು "ಹಾಥೋಂ ಕೋ ಕಾಮ್"– ದುಡಿಮೆಯ

ಹಕ್ಕನ್ನು ಎತ್ತಿಹಿಡಿವ ಹಾಡು, ಆಳವಾದ ಕೋಪ ಅದರಲ್ಲಿದೆ. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾನೂನು (NREGA) ಪೂರ್ಣ ಜಾರಿಗೆ ಬರಬೇಕೆಂದು ಹೋರಾಡುತ್ತಿರುವ ಗುಂಪುಗಳು ಹಾಗೂ ಹಲವಾರು ಟ್ರೇಡ್ ಯೂನಿಯನ್‌ಗಳು **"ಹಾಥೋಂ ಕೊ ಕಾಮ್"** ಎಂಬ ಹಾಡನ್ನು ವ್ಯಾಪಕವಾಗಿ ಬಳಸಿಕೊಳ್ಳುತ್ತಿವೆ. ಚರಿತ್ರೆಯ ಒಂದು ಕಾಲಘಟ್ಟದಿಂದ ಇನ್ನೊಂದು ಕಾಲಘಟ್ಟಕ್ಕೆ ಸಾಗುತ್ತಾ ಮಾನವ ದುಡಿಮೆಯ ಪವಾಡವನ್ನು ಕೊಂಡಾಡುತ್ತದೆ ಈ ಹಾಡು. ಎಲ್ಲ ಬೆಳೆ ಬೆಳೆವ ರೈತನಿಗೇಕೆ ಉಣ್ಣಲು ಆಹಾರವಿಲ್ಲ? ಕಟ್ಟಡಗಳ ಕಟ್ಟುವ ಕೂಲಿಗಾರನಿಗೇಕೆ ಮಲಗಲು ಫುಟ್‌ಪಾತಿನಲ್ಲೂ ಜಾಗವಿಲ್ಲ? ಬಟ್ಟೆ ನೇಯುವ ನೇಕಾರನ ಮೈಮೇಲಿರುವ ಬಟ್ಟೆಗಳೇಕೆ ನೂರಾರು ತೂತುಗಳಿಂದ ತುಂಬಿವೆ? ಕರಕುಶಲ ಕಲೆಗಾರ ಕೊಳಲು, ತಂಬೂರಿಗಳ ಸೃಷ್ಟಿಸಿದರೂ ಅವನ ಬದುಕಿನಲ್ಲೇಕೆ ಕಿಂಚಿತ್ತೂ ಸಂಗೀತ ಇಲ್ಲವಾಗಿದೆ? ಎಂಬುದನ್ನು ತಿಳಿಯಲು ಈ ಹಾಡು ಹಕ್ಕೊತ್ತಾಯ ಮಾಡುತ್ತದೆ.

***ಉಂಗಲಿಯೋಂಕೋ ಮೋಡ್‌ಕರ್, ಹಾಥೋಂಕೋ ಉಠಾಯೇಂಗೇ***
***ಅಸಮಾನ ಕೋ ಛೂಯೇಂಗೇ, ಜಿಂದಾಬಾದ್ ಗಾಯೇಂಗೇ***
***ಗಾಯೇಂಗೇ ತಬ್ ತಕ್ ರೆ ಕಿ ಜಬ್‌ತಕ್ ಕಾಮ್ ನಹೀ ಹೈ***
***ಲಡೇಂಗೇ ತಬ್ ತಕ್ ರೆ ಕಿ ಜಬ್ ತಕ್ ಕಾಮ್ ನಹೀ ಹೈ***

(ಕೈ ಬೆರಳುಗಳ ಮಡಿಚಿ ಮುಷ್ಟಿ ಮಾಡಿ ಕೈಗಳ ಮೇಲೆತ್ತುವೆವು, ಆಕಾಶವನ್ನು ಮುಟ್ಟಿ "ಜಿಂದಾಬಾದ್" ಎಂದು ಹಾಡುವೆವು. ಹಾಡುತ್ತಲೇ ಇರುತ್ತೇವೆ ಕೆಲಸ ಸಿಗುವವರೆಗೂ ಹೋರಾಡುತ್ತಲೇ ಇರುವೆವು ಕೆಲಸ ಸಿಗುವವರೆಗೂ)

ಚಾರುಲ್ ಮತ್ತು ವಿನಯ್ ಅವರ ಹಾಡುಗಳಲ್ಲಿ ಮುಖ್ಯವಾಗಿ ಕಾಣಿಸಿಕೊಳ್ಳುವ ಇನ್ನೊಂದು ವಸ್ತು Border - ಗಡಿರೇಖೆಗಳನ್ನು ಕುರಿತದ್ದು. ಚಾರುಲ್ ಹೇಳುತ್ತಾರೆ, "ಈ ಬಾರ್ಡರ್ ಎಂಬ ಪದ ಬಹುಶಃ ಇಡೀ ಜಗತ್ತಿನಲ್ಲೇ ಅತ್ಯಂತ ಕುರೂಪಿ ಸೃಷ್ಟಿ. ದುರದೃಷ್ಟದಿಂದ ಗುಜರಾತಿನ ಸಾಮಾನ್ಯ ಹಿಂದೂಗಳ ದಿನನಿತ್ಯದ ಪದಭಂಡಾರದಲ್ಲಿ ಅದು ಸೇರಿದೆ. ನಗರದ ಮುಸ್ಲಿಂ ಕಾಲೋನಿಯ ಬಗ್ಗೆ ಹೇಳುವಾಗ ಅದನ್ನು 'ಆ ಗಡಿಯಾಚೆಯ ಜಾಗ' ಎಂದು ಕರೆಯಲು ಅವರು ಸ್ವಲ್ಪವೂ ಹಿಂದು ಮುಂದು ಯೋಚಿಸಲಾರರು. ಗಡಿಯ ಒಳಗೇ ಆಡಿಕೊಳ್ಳಬೇಕು ಎಂದು ತಮ್ಮ ಮಕ್ಕಳಿಗೆ ಹೇಳುತ್ತಾರೆ, ಅದೇ ರೀತಿ ಮುಸಲ್ಮಾನರು ಕೂಡ 'ನನ್ನ ಮನೆ ಆ ಗಡಿಯ ಆಚೆಗಿದೆ' ಎಂದು ಹೇಳುವುದನ್ನು ರೂಢಿಸಿಕೊಂಡಿದ್ದಾರೆ. ಅಹಮದಾಬಾದ್‌ನಲ್ಲಿರುವ ಯಾರಾದರೊಬ್ಬ ಮುಸ್ಲಿಂ ನಿಮಗೆ ಹೇಳಬಹುದು. 'ಈ ಬಾರ್ಡರ್ ದಾಟಿಹೋದರೆ ತುಂಬ ಅಪಾಯ' ಎಂದು."



**"ಆ ಲಕೀರೇ ಮಿಟಾ ದೇ"** (ಬನ್ನಿ ಗಡಿರೇಖೆಗಳ ಅಳಿಸೋಣ) ಎಂಬ ಹಾಡನ್ನು ಇವರು ಬರೆಯಲಿಕ್ಕೆ ಪ್ರೇರಣೆ ಎಂದರೆ ಬರ್ಲಿನ್ ಅಡ್ಡಗೋಡೆಯನ್ನು ನಾಶಪಡಿಸಿದ ಸಂದರ್ಭ. ಈ ಹಾಡು ಮನುಷ್ಯರ ನಡುವೆ ಇರುವ ಎಲ್ಲ ಬಗೆಯ ಗಡಿರೇಖೆಗಳನ್ನು ಅಳಿಸಲು ಕರೆ ನೀಡುತ್ತದೆ. **"ರಬ್ಬಾ ಯಾರ್ ಮಿಲಾದೇ ರೇ"** (ದೇವರೆ ನನ್ನ ಪ್ರಿಯೆಯ ಮಿಲನಕ್ಕೆ ಸಹಾಯ ಮಾಡು) ಎಂಬ ಹಾಡು ಒಬ್ಬ ಪ್ರೇಮಿಯು ಪ್ರಿಯೆಯ ಜೊತೆಗಿನ ಮರುಮಿಲನಕ್ಕೆ ಹಾತೊರೆವ ಒಂದು ಮೊರೆ. ಪ್ರೇಮಕ್ಕೆ ದೇಶ, ಧರ್ಮ, ಜಾತಿ, ಜನಾಂಗಗಳ ಗಡಿಗಳಿಲ್ಲ ಎನ್ನುವುದನ್ನು ನೆನಪಿಗೆ ತಂದು ಕೊಡುವ ಹಾಡು ಇದು.

'ಪ್ರೇಮಿ ಮಿಲನಕ್ಕೆ ಹಾತೊರೆಯುವುದು ಸರಿ, ಆದರೆ ಯಾವಾಗಲೂ ಒಟ್ಟೊಟ್ಟಿಗೇ ಬಾಳುವುದು, ಒಟ್ಟಿಗೇ ದುಡಿಯುವುದು, ಒಟ್ಟಿಗೇ ಹಾಡುವುದರಲ್ಲಿ ನಿಮ್ಮಿಬ್ಬರ ನಡುವೆ ಪರಸ್ಪರ ಯಾವಾಗಲೂ ಕೋಪ ಕೆರಳಿಲ್ಲವಾ?' ಎಂದು ನಾನು ಛೇಡಿಸುತ್ತಾ ಅವರನ್ನು ಪ್ರಶ್ನಿಸಿದೆ. 'ಖಂಡಿತ ಇಲ್ಲ' ಎಂದರು ವಿನಯ್, ಚಾರುಲ್ ಥಟ್ಟನೆ 'ಹೌದು' ಎಂದರು. ಇಬ್ಬರೂ ಕೂಡಲೆ ಗೊಳ್ಳೆಂದು ನಗತೊಡಗಿದರು. "ನೋಡಿ" ವಿನಯ್ ವಿವರಿಸುತ್ತಾರೆ, "ನಾವಿಬ್ಬರೂ ಒಟ್ಟಾಗಿ ಇರಬೇಕೆಂದೇ ಪ್ರಜ್ಞಾಪೂರ್ವಕವಾಗಿ ಮಾಡಿಕೊಂಡ ಆಯ್ಕೆ ನಮ್ಮದು. ಆದ್ದರಿಂದ, ಹೌದು, ನಾವೂ ಎಷ್ಟೋ ಸಲ ವಾದಕ್ಕೆ ತೊಡಗಿ, ಜಗಳ ಮಾಡಿದರೂ ಕೆಲಸಗಳನ್ನು ಸಫಲಗೊಳಿಸುವ ವಿಷಯದಲ್ಲಿ ನಮ್ಮ ಬದ್ಧತೆ ಪೂರ್ಣರೂಪದ್ದು."

ಚಾರುಲ್ ಮತ್ತು ವಿನಯ್ ಬದುಕಿನಲ್ಲಿ ತುಂಬ ಸದಾ ಕಷ್ಟದ ಹಾದಿಯನ್ನೇ ಆರಿಸಿಕೊಂಡಿದ್ದಾರೆ. ತಮ್ಮ ಕೆಲಸಗಳಿಗೆ ಯಾವುದೇ ಸಂಘ ಸಂಸ್ಥೆಗಳ ಸಹಾಯಧನ ಪಡೆದುಕೊಂಡವರಲ್ಲ. ಸಂಶೋಧನಾ ಯೋಜನೆಗಳಿಗೆಂದು ಸಿಗುವ ಅಲ್ಪ ಮೊತ್ತದ ಫೆಲೋಷಿಪ್‌ಗಳಿಂದ ದೊರೆವ ಆದಾಯದಿಂದಲೇ ಅವರ ಬದುಕೂ ಹೋರಾಟ ಕಾರ್ಯವೂ ನಡೆಯಬೇಕು. ಇದರಿಂದಾಗಿ ಅವರ ಹಾಡುಗಾರಿಕೆಗೂ ಹಲವು ಪರಿಮಿತಿಗಳು ಉಂಟಾಗಿವೆ. ಚಾರುಲ್ ಹೇಳುತ್ತಾರೆ. "ನಮಗೆ ಇನ್ನೂ 50 ಹಾಡುಗಳನ್ನು ರಚಿಸುವಷ್ಟು ವಿಚಾರಗಳ ಹೊಳಹು ಇದೆ. ಆದರೆ ಅವುಗಳನ್ನು ಬರೆಯಲಿಕ್ಕೆ ಬಿಡುವೇ ಇಲ್ಲ. 'ಇನ್ಸಾನ್ ಹೈ ಹಮ್' ಹಾಡುಗಳ ಸಂಕಲನವನ್ನು ದೇಶದ ಅನೇಕ ಸ್ಥಳಗಳಿಗೆ 'ಯಾತ್ರೆ'ಯ ರೀತಿ ಕೊಂಡೊಯ್ಯುವ ಆಸೆ ನಮಗಿದೆ. ಆದರೆ ಹಣದ ಕೊರತೆಯಿಂದ ಅದು ಸಾಧ್ಯವಾಗುತ್ತಿಲ್ಲ." ಇಷ್ಟೆಲ್ಲಾ ಮಿತಿಗಳೊಂದಿಗೆ ದೀರ್ಘಕಾಲದಿಂದ ಹೋರಾಟಗಳಲ್ಲಿ ತೊಡಗಿರುವ ಈ ದಂಪತಿಗಳು ಈ ವರ್ಷ ತಮ್ಮ ಸಂಶೋಧನಾ ಕಾರ್ಯಕ್ಕೆ ಮೂರು ವರ್ಷ ಬಿಡುವು ಕೊಡಲು ನಿರ್ಧರಿಸಿದ್ದಾರೆ. AID - ಜನಪಥಾರವರು ಮಂಜೂರು ಮಾಡಿರುವ ಅಲ್ಪಪ್ರಮಾಣದ ಫೆಲೋಷಿಪ್‌ನಿಂದ ತಮ್ಮ ಖರ್ಚುವೆಚ್ಚಗಳನ್ನು ಅವರು ಸರಿದೂಗಿಸಿಕೊಂಡು ಬದುಕಬೇಕಾಗಿದೆ. ತಮ್ಮ ಕನಸುಗಳನ್ನು ಸಾಕಾರಗೊಳಿಸಲು ಅವರಿಗೆ ಬಿಡಿ ವ್ಯಕ್ತಿಗಳೂ ನೆರವು ನೀಡಬೇಕಾಗಿದೆ. ಅವರ 'ಲೋಕನಾದ್' ಸಂಸ್ಥೆಗೆ ಏನಾದರೂ ನೀವೂ ಸಹಾಯ ನೀಡಬಯಸಿದರೆ ಅಥವಾ ಚಾರುಲ್ ಮತ್ತು ವಿನಯ್ ಅವರನ್ನು 'ಇನ್ಸಾನ್ ಹೈ ಹಮ್' ಕಾರ್ಯಕ್ರಮ ನಡೆಸಿಕೊಡಲು ನಿಮ್ಮ ಶಾಲೆಗೋ ಕಾಲೇಜಿಗೋ, ನಿಮ್ಮ ನೆರೆಯ ಜಾಗಗಳಿಗೋ ಕರೆಸುವ ಆಸೆ ನಿಮಗೆ ಇದ್ದರೆ, ದಯವಿಟ್ಟು ಈ ಕೆಳಗಿನ ಅವರ ವಿಳಾಸಕ್ಕೆ ಬರೆಯಿರಿ.

Loknaad
No. 103, Vaibhav Apartments
SBI Bank Lane, Nehru Park,
Vastra Pura, Ahmedabad - 380 015
Ph. : 079-26753663
E-mail : loknaad@gmail.com

❑

> ನಮ್ಮ ನಂಬಿಕೆಗಳು
> ಒಂದು ದೇಶ
> ನಮ್ಮ ಕೂದಲುಗಳು
> ಒಂದು ಬಾವುಟ
> ನಮ್ಮ ಬಗೆಗಿನ ನಮ್ಮ ಪ್ರೀತಿ
> ನಮ್ಮ ಸ್ವಾತಂತ್ರ್ಯ
>
> **ಆಲಿಸ್ ವಾಕರ್**

# ನಿರಾಶ್ರಿತೆಯ ಸಾಕ್ಷಿ

**ಕ್ರಿಸ್ತೀನಾ, ಮಧ್ಯ ಆಫ್ರಿಕ**

*ನಾನು ಮಧ್ಯ ಆಫ್ರಿಕಾದ ನಿರಾಶ್ರಿತೆ. ಅಂತಃಕಲಹದಲ್ಲಿ ನನ್ನ ಗಂಡನನ್ನು ಕಳೆದುಕೊಂಡೆ. ನನಗೆ ನಾಲ್ವರು ಮಕ್ಕಳು. ಯುದ್ಧದ ಆತಂಕ ಮತ್ತು ಮಕ್ಕಳ ಚಿಂತೆಯಿಂದ ದೇಶ ಬಿಟ್ಟೆ. ಗಂಡ, ಕುಟುಂಬ ಮತ್ತು ಉದ್ಯೋಗ ಎಲ್ಲವನ್ನು ಕಳೆದುಕೊಂಡ ನಾನು ಮಲಾವಿಗೆ ವಲಸೆ ಹೋದೆ. ಜೀವನ ತುಂಬಾ ಕಷ್ಟವಾಗಿತ್ತು. ದ.ಆಫ್ರಿಕದಲ್ಲಿ ಟ್ರಕ್ ಚಾಲಕನನ್ನು ಭೇಟಿಯಾದೆ. ಅವನು ನನ್ನೊಂದಿಗೆ ನನ್ನ ಮಕ್ಕಳಿಗೂ ಆಪ್ತನಾದ. ಮಕ್ಕಳನ್ನು ಸ್ವಂತ ಮಕ್ಕಳಂತೆ ಭಾವಿಸುತ್ತಿದ್ದ. ನನ್ನ ಮದುವೆಯಾಗುವುದಾಗಿ ಮಾತುಕೊಟ್ಟ. ನನಗೊಂದು ಉದ್ಯೋಗ, ಬಾಡಿಗೆ ಮನೆ ಗೊತ್ತುಮಾಡುವುದಾಗಿ ಹೇಳಿದ. ನನ್ನ ದ.ಆಫ್ರಿಕಾಗೆ ಕರೆದುಕೊಂಡು ಹೋಗುವುದು ಅವನ ಇಂಗಿತವಾಗಿತ್ತು; ತಕ್ಷಣ ಒಪ್ಪಿಕೊಂಡೆ.*

*ದ.ಆಫ್ರಿಕ ತಲುಪಿದ ತಕ್ಷಣ ಜೋಹಾನ್ಸ್‌ಬರ್ಗ್‌ನಲ್ಲಿ ಮನೆ ಬಾಡಿಗೆಗೆ ತೆಗೆದುಕೊಂಡೆವು. ಜೀವನದಲ್ಲಿ ಮತ್ತೆ ಚೈತ್ರ ಬಂದಂತೆ ಸಂತಸವಿತ್ತು. ಆದರೆ 3 ತಿಂಗಳು ಕಳೆದ ಮೇಲೆ ದೃಶ್ಯಗಳು ಬದಲಾಗತೊಡಗಿದವು. ದೀರ್ಘಪ್ರಯಾಣದಿಂದ ಮರಳಿ ಬಂದ ಗಂಡ ನನ್ನನ್ನು ಕುಡಿಯಲು ಕರೆದುಕೊಂಡು ಹೋಗುತ್ತಿದ್ದ. ಮನೆಗೆ ಮರಳಿದ ನಂತರ ಒತ್ತಾಯಿಸುತ್ತಿದ್ದ. ನಿರಾಕರಿಸಿದರೆ ಹೊಡೆಯುತ್ತಿದ್ದ. ಅಪಮಾನ ಮತ್ತು ನೋವನ್ನು ಸಹಿಸಿಕೊಳ್ಳಬೇಕಾಗಿತ್ತು. ಪ್ರತಿಭಟಿಸಿದರೆ ತನ್ನ ಗೆಳೆಯರನ್ನು ಕರೆತರುತ್ತಿದ್ದ. ಅವರೆಲ್ಲರೂ ಒಟ್ಟಾಗಿ ನನ್ನನ್ನು ಅಪಮಾನಿಸಿ, ಅವನಿಗೆ ಹಣಕೊಡುತ್ತಿದ್ದರು. ವಿಷಯವನ್ನ ಇತರರಿಗೆ ತಿಳಿಸಿದರೆ ಕೊಲ್ಲುವುದಾಗಿ ಬೆದರಿಕೆ ಹಾಕುತ್ತಿದ್ದ. ನಾನು ದ.ಆಫ್ರಿಕಾದಲ್ಲಿ ವಾಸಿಸುತ್ತಿದ್ದುದೇ ಕಾನೂನು ಬಾಹಿರವಾಗಿ. ಆದಕಾರಣ ಎಲ್ಲವನ್ನೂ ನುಂಗಿಕೊಂಡು ಸುಮ್ಮನಿರಬೇಕಿತ್ತು. ತಪ್ಪಿಸಿಕೊಳ್ಳುವ ದಾರಿ ಹುಡುಕುತ್ತಿದ್ದೆ. ಕೆಲವು ಮಹಿಳೆಯರಿಂದ ನೆರವು ಸಿಕ್ಕಿತು, ಬೀದಿಗಿಳಿಯುವಂತೆ ಅವರು ಸಲಹೆ ಕೊಟ್ಟರು; ನಾನು ವೇಶ್ಯೆಯಾದೆ.*

*ಗಂಡ ಪ್ರಯಾಣಕ್ಕೆ ಹೊರಟಾಗಲೆಲ್ಲಾ ನಾನು ಬೀದಿಗಿಳಿಯುತ್ತಿದ್ದೆ. ಅವನು ಮನೆಗೆ ಮರಳಿಬಂದಾಗ ಕಾವಲು ನಾಯಿಗಳಂತಿದ್ದ ಗೆಳೆಯರು ಮುತ್ತಿಕೊಳ್ಳುತ್ತಿದ್ದರು. ನಾನು ಮನೆಯಲ್ಲಿರುವುದಿಲ್ಲ ಅಂತಾ ಅವರು ನನ್ನ ಗಂಡನಿಗೆ ಹೇಳಿದರು. ಆಗ ಅವನು ಹೆಚ್ಚು ಕಡಿಮೆ ನನ್ನ ಕೊಂದೇ ಬಿಡುತ್ತಿದ್ದ. ಸಾಕಷ್ಟು ಹಣ ಗಳಿಸಿದ ನಂತರ ನಾನು ತಪ್ಪಿಸಿಕೊಂಡು ಕೇಪ್‌ಟೌನಿಗೆ ಹೋದೆ. ಅಲ್ಲಿ ಬೀದಿಯ ಹೆಂಗೆಳೆಯರು 'ನೀನೊಬ್ಬಳು ವೇಶ್ಯೆ, ಅದನ್ನು ಮರೆಯಬೇಡ' ಎಂದರು. ನಾನು ಗೆಳತಿಯೊಂದಿಗೆ ವಾಸಿಸುತ್ತಿದ್ದೆ. ಬದುಕು ಅಷ್ಟು ಸುಗಮವಾಗಿರಲಿಲ್ಲ. ಮಕ್ಕಳ ಹಸಿವು ನೀಗಲು ನಾನು ಬೀದಿಗೆ ಹೋಗಲೇಬೇಕಾದ ಒತ್ತಾಯವಿತ್ತು. ನನಗೆ ಕಾಯಿಲೆಯಾಯಿತು, ಯಾವುದೇ ಕೆಲಸ ಮಾಡಲು ಆಗುತ್ತಿರಲಿಲ್ಲ, ಚಿಕಿತ್ಸೆಗಾಗಿ ಆಸ್ಪತ್ರೆಗೆ ಹೋದೆ. ನನಗೆ ಹೆಚ್.ಐ.ವಿ ಸೋಂಕು ತಗುಲಿರುವುದನ್ನ ವೈದ್ಯರು ತಿಳಿಸಿದರು. ಎದೆಗುಂದಿದ ನಾನು ಮಕ್ಕಳೊಂದಿಗೆ ಜೀವ ಕಳೆದುಕೊಳ್ಳಲು ಮುಂದಾದೆ. ಆದರೆ ನನ್ನ ಗೆಳತಿಯ ಸಾಂತ್ವನದಿಂದ ಸುಮ್ಮನಾದೆ. ನನ್ನ ಶರೀರ ಮತ್ತು ಆತ್ಮಗಳನ್ನು ಒಂದಾಗಿಟ್ಟುಕೊಳ್ಳಲು ತುಂಬಾ ಪ್ರಯಾಸ ಪಡಬೇಕಾಯಿತು. ನಾನಿದ್ದ ಪರಿಸ್ಥಿತಿಯಲ್ಲಿ ವಾರಕ್ಕೆ 2–3 ದಿವಸ ಕೆಲಸ ಮಾಡಬೇಕಿತ್ತು.*

*ನಾನು ಸಾಯುತ್ತಿದ್ದೇನೆ, ಆದರೆ ಗೌರವಯುತವಾಗಿ ಸಾಯಲು ಬಯಸುತ್ತಿದ್ದೇನೆ. ನನಗೆ ಎಂಥದಾದರೂ ಉದ್ಯೋಗ ಸಿಕ್ಕರೆ ಬೀದಿಯ ಅಪಮಾನದ ಧೂಳಿನಿಂದ ಹೊರಬಂದು ಮಕ್ಕಳ ಕಡೆಗೆ ಗಮನ ಕೊಡಬಹುದು. ಇತರೆ ಮಕ್ಕಳಂತೆ ಅವರಿಗೂ ಅನ್ನ, ಬಟ್ಟೆ, ಇರಲೊಂದು ಸೂರು ಬೇಕು. ನಾನು ಇಲ್ಲದಂತಾದ ಮೇಲೆ ಅವರ ಪಾಡೇನು? ಅಂತಾ ಚಿಂತಿಸುತ್ತೇನೆ. ನಾನಿನ್ನು ಮನೆಗೆ ಮರಳುವುದು ಸಾಧ್ಯವಿಲ್ಲ, ನನ್ನ ಕುಟುಂಬದ ಸಂಪರ್ಕ ಕಡಿದು ದೀರ್ಘಕಾಲವಾಯಿತು. ಇಲ್ಲಿ ಈ ಸಭೆಯಲ್ಲಿ ಸೇರಿರುವ ಅಕ್ಕತಂಗಿಯರನ್ನು ಕಂಡು ಮಾತನಾಡುವ ಧೈರ್ಯ ಬಂದಿದೆ. ಇದು ನನ್ನ. ಮುಂದಿನ ಬದುಕಿಗೂ ಸಾಂತ್ವನದಂತೆ ಕಾಣುತ್ತಿದೆ.*

*ಕೃಪೆ :* **ಕತ್ತಲ ಕಾಲದ ಹಾಡು**

# ನಿರಾಶ್ರಿತ ಮಹಿಳೆಯರ ಆಸರೆ ಹಕ್ಕಿನ ಸರ್ಕಾರಿ ತಾರತಮ್ಯಗಳು

ಮಹಿಳೆಯರು ಅನುಭವಿಸುವ ಹಿಂಸೆಗೆ ಸೂಕ್ತವಾಗಿ ಪ್ರತಿಕ್ರಿಯಿಸುವಂತೆ ಸ್ತ್ರೀವಾದಿ ಚಿಂತಕರು ಅಂತಾರಾಷ್ಟ್ರೀಯ ಮಾನವ ಹಕ್ಕು ಕಾಯಿದೆಯನ್ನು ತೀವ್ರವಾಗಿ ಟೀಕಿಸಿದ್ದಾರೆ. ಹಿಂಸೆಯಿಂದ ಪಾರಾಗಿ ಬೇರೆ ದೇಶಗಳಲ್ಲಿ ನೆಲೆಸಬಯಸುವ ಮಹಿಳೆಯರು, ನಿರಾಶ್ರಿತರ ಸ್ಥಿತಿಗತಿಗೆ ಸಂಬಂಧಿಸಿದ 1951ರ ಅಧಿವೇಶನದ ರಕ್ಷಣೆಯ ಪ್ರಕಾರ ಸಮಾನ ಸವಲತ್ತುಗಳನ್ನ ಪಡೆದುಕೊಳ್ಳಲು ಸಾಧ್ಯವಾಗುತ್ತಿಲ್ಲ. ಈಗ ನಡೆದಿರುವ ತಾಂತ್ರಿಕ ಮತ್ತು ಅನುಭವಜನ್ಯ ಸಂಶೋಧನೆಗಳಲ್ಲಿ ಈ ಕಾಳಜಿಗಳು ಬಿಂಬಿತವಾಗಿವೆ. ಅಂತಾರಾಷ್ಟ್ರೀಯ ಮಾನದಂಡಗಳು, ಪುರುಷ ಮತ್ತು ಮಹಿಳೆಯರ ನಡುವೆ ಯಾವ ವಿಶಿಷ್ಟ ವ್ಯತ್ಯಾಸಗಳನ್ನು ಮಾಡದಿದ್ದರೂ, ನಿರಾಶ್ರಿತರನ್ನು ಸ್ವೀಕರಿಸುವ ದೇಶಗಳ ವ್ಯಾಖ್ಯಾನಗಳು ದೇಶಗಳಲ್ಲಿ ಆಂತರಿಕವಾಗಿ ಲಿಂಗ ತಾರತಮ್ಯವನ್ನು ಬಿಂಬಿಸುತ್ತವೆ ಮತ್ತು ಗಟ್ಟಿಗೊಳಿಸುತ್ತವೆ ಎಂದು ಸಂಶೋಧನೆ ಸೂಚಿಸುತ್ತದೆ. ಇದರ ಫಲವಾಗಿ ಬಹಳಷ್ಟು ಮಹಿಳೆಯರ ರಕ್ಷಣೆ ನಿರಾಕರಣೆಗೆ ಒಳಗಾಗಿದೆ; ಇದಕ್ಕೆ ನಿರಾಶ್ರಿತರ ಕುರಿತ ಕಾಯಿದೆಗಿಂತ ಆಕೆ ಮಹಿಳೆಯಾಗಿರುವುದೇ ಕಾರಣ.

ಮಹಿಳೆ ಅನುಭವಿಸುವುದು ಎಲ್ಲಾ ನಿರಾಶ್ರಿತರೂ ಅನುಭವಿಸುವ ವಂಚಿತ ಭಾವನೆ ಮತ್ತು ತೊಂದರೆಗಳನ್ನೇ. ಆದರೆ ಅವರು ರಾಜಕೀಯ ಕಾರ್ಯಕರ್ತರಾಗಿರುವ, ಸಮುದಾಯ ಸಂಘಟಕರಾಗಿರುವ ತಮ್ಮ ಅಥವಾ ಬಂಧುಗಳ ಹಕ್ಕುಗಳನ್ನ ಗೌರವಿಸಬೇಕೆಂದು ಒತ್ತಾಯಿಸುವ ಕಾರಣಕ್ಕೆ ಅವರನ್ನು ಗುರಿಯಾಗಿಸಿಕೊಳ್ಳಲಾಗುತ್ತದೆ. ಅವರನ್ನು ಅನೇಕ ಸಲ ಶಿಕ್ಷೆಗೆ ಒಳಪಡಿಸುವುದು, ಅವರು ಪ್ರಭುತ್ವದ ರಾಜಕೀಯ ರಚನೆಯನ್ನು ವಿರೋಧಿಸುವುದರಿಂದಷ್ಟೇ ಅಲ್ಲ, ರಾಜಕೀಯವಾಗಿ ಕ್ರಿಯಾಶೀಲರಾಗಿರದಿದ್ದರೂ ಲಿಂಗ ತಾರತಮ್ಯದ ಪ್ರಬಲ ತಾತ್ವಿಕತೆಗಳಿಗೆ ಸವಾಲು ಹಾಕುವ ಕಾರಣಕ್ಕೆ (ಸ್ಪಿಜ್ ಕರ್ಬೊರ್ 1994; ಪೆಟ್‌ಮನ್ 1996).

ಮಹಿಳೆಯರ ರಾಜಕೀಯ ಪ್ರತಿಭಟನೆ, ಕ್ರಿಯಾಶೀಲತೆ ಮತ್ತು ಪ್ರತಿರೋಧ ಹಲವು ರೀತಿ ಪ್ರಕಟಗೊಳ್ಳಬಹುದು. ಮಹಿಳೆಯರು ಜನರನ್ನ ಬಚ್ಚಿಟ್ಟುಕೊಳ್ಳಬಹುದು, ಸಂದೇಶ ರವಾನಿಸಬಹುದು ಅಥವಾ ಊಟ, ಬಟ್ಟೆ, ಔಷಧ, ಉಪಚಾರಗಳ ಮೂಲಕ ಸಾಮುದಾಯಿಕ ಸೇವೆ ಒದಗಿಸಬಹುದು. ತಮ್ಮ ವರ್ತನೆಗಳ ಬಗ್ಗೆ ಜಾರಿಯಲ್ಲಿರುವ ಪ್ರಭುತ್ವದ ಕಾಯಿದೆ ಕಟ್ಟಲೆಗಳನ್ನ ಪ್ರತಿರೋಧಿಸುವ ಕಾರಣ ಅನೇಕ ಮಹಿಳೆಯರನ್ನು ಶಿಕ್ಷೆಗೆ ಒಳಪಡಿಸಲಾಗಿದೆ. ಇವುಗಳಿಗೆ ಸವಾಲು ಹಾಕುವ ಅಥವಾ ತಮ್ಮ ಮೇಲೆ ವಿಧಿಸಲಾಗಿರುವ ಒತ್ತಡಗಳಿಗೆ ಮಣಿಯದಿದ್ದಾಗ ಅವರ ಮೇಲೆ ಅಮಾನುಷ ಹಿಂಸೆ ನಡೆಸಲಾಗುತ್ತದೆ. ಮಹಿಳೆಯರು ತಮ್ಮ ಜನಾಂಗ ಅಥವಾ ಕುಟುಂಬದ ನಿಂದನೆಗೆ ಒಳಗಾಗುತ್ತಾರೆ. ಇದರ ಜೊತೆಗೆ ಪುರುಷರ ರಾಜಕೀಯ ವಿರೋಧವನ್ನು ಮುಚ್ಚಿ ಹಾಕಲು ಅಥವಾ ತೊಂದರೆಗಳನ್ನು ಹೆಚ್ಚಿಸಲು ಅಧಿಕಾರಸ್ಥರು ಕೌಟುಂಬಿಕ ಸಂಬಂಧಗಳನ್ನು ಶೋಷಣೆ ಮಾಡಬಹುದು. ರಾಜಕೀಯ ಚಹರೆಗಳು ರಚನೆಯಾಗಿರುವ ಲಿಂಗ ವಿಧಿ, ವಿಧಾನಗಳನ್ನು ಮಾನ್ಯ ಮಾಡದೇ ಇದ್ದಾಗ ಮಹಿಳೆಯರ ರಕ್ಷಣೆಯ ಅವಕಾಶಗಳು ಮುಚ್ಚಿಹೋಗುತ್ತವೆ.

ಸರ್ಕಾರದೊಂದಿಗೆ ಮಹಿಳೆಯ ಸಂಬಂಧ ಹೇಗೆ ಜನಾಂಗ ಆಧಾರವಾಗಿದೆಯೋ ಹಾಗೆಯೇ ಲಿಂಗಾಧಾರವಾಗಿಯೂ ಇರುತ್ತದೆ. ಆದ್ದರಿಂದ ಜನಾಂಗ, ಲಿಂಗ ವಿಧಿವಿಧಾನ ಮತ್ತು ಚಹರೆಗಳನ್ನು ಜೊತೆಗೂಡಿಸುವುದು ಮುಖ್ಯ. ಇವೆಲ್ಲವೂ ಬೇರೆ ಬೇರೆಯಾಗಿರುತ್ತವೆ ಎಂದು ತಿಳಿಯಬಾರದು ಎಂದು ಆಂತೀಯಾಸ್ ಮತ್ತು ಯುವಾಲ್ ಡೇವಿಸ್(1992) ಸಲಹೆ ಮಾಡಿದ್ದಾರೆ. ಮಹಿಳೆಯರ ರಾಜಕೀಯ ಚಹರೆಗಳು ಮತ್ತು ಅವರ ದಂಡನೆಯ ಅನುಭವಗಳು ಹೇಗೆ ಜನಾಂಗ ಸಾಂಸ್ಕೃತಿಕ ಮತ್ತು ಲಿಂಗ ಚಹರೆಗಳಿಂದ ರೂಪುಗೊಂಡಿರುತ್ತವೋ ಹಾಗೆಯೇ ವರ್ಗ, ವಯಸ್ಸು ಮತ್ತು ವೈವಾಹಿಕ ಸ್ಥಿತಿಗತಿಗಳ ಮೇಲೂ ರೂಪಿತಗೊಂಡಿರುತ್ತವೆ. ಆಸರೆ ನಿರ್ಧಾರಗಳ ಬಗೆಗಿನ ಅವರ ಅನುಭವಗಳು, ಅವರ ಹಕ್ಕೊತ್ತಾಯದ ಅಂತಿಮ ಫಲಿತಾಂಶಗಳು, ಇದೇ ರೀತಿ ಚಹರೆಗಳ ಬಹು ಮುಖತೆಯೊಂದಿಗೆ ಸ್ವೀಕರಿಸುವ ಪ್ರಭುತ್ವಗಳ ರಾಜಕೀಯ ಕಾರ್ಯಕ್ರಮಗಳನ್ನು ಕೂಡ ಪ್ರತಿಬಿಂಬಿಸುತ್ತವೆ. ಇದು ಸಂಭವಿಸುವ ತುಂಬಾ ಸ್ಪಷ್ಟಮಾರ್ಗವೆಂದರೆ ವಿಶ್ವಾಸ ಯೋಗ್ಯತೆ; ಬ್ರಿಟನ್ನಿನಲ್ಲಿ ಮಾಡಲಾದ ಬಹುಪಾಲು ಅರ್ಜಿಗಳಲ್ಲಿ ಇದು ವ್ಯಾಪಕ ಸಮಸ್ಯೆಯಾಗಿ ಉಳಿದುಕೊಂಡಿದೆ(ನಿರಾಶ್ರಿತರ ಪರಿಷತ್ತು 1996).

ಉದಾಹರಣೆಗೆ ಲೈಂಗಿಕ ಹಿಂಸೆಯಲ್ಲಿ ಬದುಕುಳಿದವಳು ಕಪ್ಪು ಮಹಿಳೆಯಾದರೆ, ಜನಾಂಗ ಮತ್ತು ಲಿಂಗ ತಾರತಮ್ಯಗಳು ವಿಲಕ್ಷಣ ರೀತಿಯಲ್ಲಿ ಒಂದಾಗಿ ಆಕೆಯ ತೀವ್ರ ಕಡೆಗಣಿಕೆಗೆ ಕಾರಣವಾಗುತ್ತವೆ. (ರಜಾಕ್ : 4: 897) ಕಪ್ಪು ಜನರ ಲೈಂಗಿಕತೆ ಬಗೆಗಿನ ಜನಾಂಗ ದ್ವೇಷಿ ಪುರಾಣಗಳ ದೆಸೆಯಿಂದಾಗಿ ಆಕೆಯ ಮೇಲಿನ ಅಪನಂಬಿಕೆ ಗಾಢವಾಗುತ್ತದೆ.

ಆಶ್ರಯ ಕುರಿತ ನಿರ್ಧಾರದ ಜನಾಂಗೀಯ ಅಂಶಗಳ ಹೊರತಾಗಿಯೂ ಅವರ ದೇಶ, ನೆಲೆಗಳನ್ನು ಬಿಟ್ಟು, ಆಶ್ರಯ ಕೋರುವ ಮಹಿಳೆಯರ ಅನುಭವಗಳ ವಿಷಯಗಳಲ್ಲಿ ಇಂಥದೇ ಸಾಮ್ಯತೆಗಳು ಎದ್ದು ಕಾಣುತ್ತವೆ. ನನ್ನ ಸಂಶೋಧನೆ ಸಮಯದಲ್ಲಿ ಸಂಗ್ರಹಿಸಿದ ಪುರಾವೆಗಳು ಸೂಚಿಸುವಂತೆ ಆಶ್ರಯ ಬಯಸಿ ಬರುವವರನ್ನು ತಡೆಗಟ್ಟುವುದಷ್ಟೇ ಅಲ್ಲ, ಅವರ ಮೇಲೆ ವೀಸಾ ನಿರ್ಬಂಧಗಳನ್ನು ಹೇರಿ ಅವರ ಬರುವಿಕೆ ತಡೆಗಟ್ಟಲು ಸಂಬಂಧಪಟ್ಟ ದೇಶಗಳಲ್ಲಿ ಅಧಿಕಾರಿಗಳನ್ನು ನೇಮಿಸಲಾಗುತ್ತದೆ. ಆದರೆ ರಾಷ್ಟ್ರೀಯ ಆಶ್ರಯ ಕಾಯಿದೆಗಳು ಅವರ ಪ್ರತಿಬಂಧಕತೆಯ ವ್ಯಾಪ್ತಿಯನ್ನೇ ಸೀಮಿತಗೊಳಿಸುತ್ತವೆ. ಆಶ್ರಯ ಕೋರಿ ಬರುವವರ ದಂಡನೆ ಅನುಭವಗಳು ರೂಪಿತ ಪಂಗಡಗಳಿಗೆ ಕರಾರುವಾಕ್ಕಾಗಿ ಹೊಂದುವುದಿಲ್ಲವಾದ್ದರಿಂದ ಅಂತಹವರಿಗೆ ರಕ್ಷಣೆ ನಿರಾಕರಿಸಲಾಗುತ್ತದೆ. ಬ್ರಿಟನ್ನಿನ ಸಂದರ್ಭದಲ್ಲಿ ಲಿಂಗ ವಿಶಿಷ್ಟ ಅಂಕಿ ಸಂಖ್ಯೆಗಳ ಕೊರತೆ ದೆಸೆಯಿಂದ ಪ್ರಮಾಣಾತ್ಮಕ ವಿಶ್ಲೇಷಣೆ ಕಷ್ಟ. ಸಂಶೋಧನೆ ಕಾಲದಲ್ಲಿ ಸಂಗ್ರಹಿಸಿದ ಪುರಾವೆಗಳು ಸೂಚಿಸುವ ಪ್ರಕಾರ, ನಿರ್ಧಾರ ತೆಗೆದುಕೊಳ್ಳುವ ವಿಧಾನಗಳಲ್ಲಿ ಮಹಿಳೆಯರಿಗೆ ಅಷ್ಟು ಸಾಮರ್ಥ್ಯ ಇಲ್ಲದಿರುವುದಷ್ಟೇ ಅಲ್ಲ, ಅವರಿಗೆ ನಿರಾಶ್ರಿತ ಸ್ಥಾನಮಾನ ಸಿಗುವುದು ಕೂಡ ಕಷ್ಟ ಮತ್ತು ಮಾನವೀಯ ಸಹಾನುಭೂತಿಯ ನೆಲೆಗಳಲ್ಲಿ ಅವರನ್ನು ನಡೆಸಿಕೊಳ್ಳುವುದೂ ಇಲ್ಲ. ಯಾಕೆಂದರೆ, ಅವಳು ಗಂಡ ಅಥವಾ ಬೇರೆ ಪುರುಷ ಸಂಬಂಧಿಗಳ ಮೇಲೆ ಆಶ್ರಿತಳು ಎಂಬ ನಂಬಿಕೆ. ಇದರ ಫಲವಾಗಿ ರಕ್ಷಣೆಯ ಸ್ಥಿತಿಗತಿ, ಮೌಲ್ಯಗಳ ಮೇಲೆ ಮಹಿಳೆಯರಿಗೆ ಹತೋಟಿಯೇ ಇಲ್ಲ. ಹಕ್ಕುಗಳನ್ನು ಕೊಡುವ ಬದಲು ಅವರನ್ನು ಬಲಿಪಶುಗಳಂತೆ, ದುರ್ಬಲರಂತೆ, ದೈನೇಸಿಗಳಾಗಿ ವರ್ತಿಸುವಂತೆ ಮಾಡುತ್ತವೆ. (ಪೆಟ್‌ಮನ್ 1996).

*ಮೂಲ: Extracts from "Engendering the State in Refugee Women`s Claim Asylum"; Heaven Crawley; States of conflict.*

## ಏಷಿಯಾದಲ್ಲಿ ಬಡತನ ಮತ್ತು ವೇಶ್ಯಾಗಾರಿಕೆ

ವಿಸ್ತರಿಸಿಕೊಳ್ಳುತ್ತಿರುವ ಅಂತಾರಾಷ್ಟ್ರೀಯ ಆರ್ಥಿಕತೆ ಮತ್ತು ಜಾಗತೀಕರಣದೊಂದಿಗೆ ಲೈಂಗಿಕ ರಂಜನೆ ಪ್ರವಾಸ ಬಹುರಾಷ್ಟ್ರೀಯ ಸಂಸ್ಥೆಗಳ ಅವಿಭಾಜ್ಯ ಅಂಗವಾಗಿದೆ. ಇದರ ಫಲವಾಗಿ ಮಹಿಳೆಯರು ಮತ್ತು ಬಾಲಕಿಯರ ಲೈಂಗಿಕ ದುಡಿಮೆ ಕೂಡ ಬಹುರಾಷ್ಟ್ರೀಕರಣಗೊಂಡಿದೆ. ದೇಶ ಮತ್ತು ಭೂಖಂಡಗಳ ನಡುವೆ ಮಹಿಳೆ ಮತ್ತು ಬಾಲಕಿಯರನ್ನು ವೇಶ್ಯಾಗೃಹಗಳಲ್ಲಿ ಬಳಕೆ ಮಾಡಿಕೊಳ್ಳುತ್ತಿರುವುದಕ್ಕೆ ಮಾತ್ರ ಗಡಿಗಳು ಅಳಿಸಿಹೋಗಿರುವ ಪರಿಸ್ಥಿತಿ ಕಾಣುತ್ತಿದ್ದೇವೆ. ಇತ್ತೀಚೆಗೆ ಬ್ಯಾಂಕಾಕಿನ ವೇಶ್ಯಾಗೃಹದಲ್ಲಿ ಬಲಾತ್ಕಾರ ಬಂಧನದಲ್ಲಿಟ್ಟು ಹಾಂಕಾಂಗಿಗೆ ಸಾಗಿಸಲು ಪ್ರಯತ್ನಿಸುತ್ತಿದ್ದ ಹನ್ನೊಂದು ಕೊಲಂಬಿಯನ್ ಮಹಿಳೆಯರನ್ನು ಥೈಲೆಂಡಿನ ಪೊಲೀಸರು ರಕ್ಷಿಸಿದರು.

ಕಾರ್ಪೊರೇಟ್ ವಲಯದ ದಂಡು ಇಂತಹ ರಂಜನೀಯ ಸ್ಥಳಗಳಿಗೆ ಆಗಾಗ ಭೇಟಿ ಕೊಡುತ್ತಿರುತ್ತದೆ. ಮೂಡಲ ದೇಶಗಳ, ಸೇವಾ ಮನೋಭಾವದ, ನಗುಮುಖದ ತರುಣಿಯರ ಸೇವೆ ಪಡೆಯುವುದು ಭೇಟಿಯ ಉದ್ದೇಶ. 'ಲೈಫ್ ಟ್ರಾವೆಲ್' ಎಂಬ ಸ್ವಿಸ್ ಪ್ರವಾಸಿ ದಲ್ಲಾಳಿ ಸಂಸ್ಥೆಯ ಪ್ರಕಾರ: ತೆಳ್ಳಗೆ ಬಳಕುವ, ಬಿಸಿಲಿಗೆ ಬಾಡಿಹೋಗುವಂತಿರುವ ಸುಂದರ ತರುಣಿಯರು ಬಿಳಿಯರಿಗೆ ಪ್ರೀತಿಯ ಸಮರ್ಪಣೆ ಮತ್ತು ಉನ್ಮಾದದ ರಂಜನೆ ಒದಗಿಸುತ್ತಾರೆ. ಡಚ್ ಪ್ರವಾಸಿ ದಲ್ಲಾಳಿ ಸಂಸ್ಥೆಯೊಂದರ ಪ್ರಕಾರ: ಈ ಪುಟ್ಟ ದಾಸಿಯರು ಥಾಯ್ಲೆಂಡಿನ ಪುರುಷರಿಗೆ ಬೆಚ್ಚಗಿನ ಸುಖ ಒದಗಿಸುತ್ತಾರೆ. ಜರ್ಮನಿಯ ವೈವಾಹಿಕ ಮತ್ತು ಪ್ರವಾಸಿ ದಲ್ಲಾಳಿ ಸಂಸ್ಥೆ ಒಂದು ಹೆಜ್ಜೆ ಮುಂದಿಟ್ಟು ಹೇಳುತ್ತದೆ: ನಮ್ಮಲ್ಲಿ ಉಣ್ಣೆಯ ಕೋಟು ಕೊಟ್ಟರೂ ಉಪಾಯ ಫಲಿಸುವುದಿಲ್ಲ. ಆದರೆ ಥೈಲೆಂಡಿನ ತರುಣಿಯರನ್ನು ಒಂದು ಕಿಲೋ ದ್ರಾಕ್ಷಿಕೊಟ್ಟು ಒಲಿಸಿಕೊಳ್ಳಬಹುದು. ವಿಯೆಟ್ನಾಂ ದೇಶದ ಮೇಲೆ ನಡೆಸಿದ ಮಿಲಿಟರಿ ದಾಳಿ ಮತ್ತು ಆಗ್ನೇಯ ಏಷಿಯಾದ ಬಹಳಷ್ಟು ಕಡೆ ಸ್ಥಾಪಿಸಲಾದ ಮಿಲಿಟರಿ ಮತ್ತು ನೌಕಾ ನೆಲೆಗಳಲ್ಲಿ ಶೀತಲ ಯುದ್ಧ ಕಾಲದಲ್ಲಿ ಬೀಡುಬಿಟ್ಟಿದ್ದ ಅಮೆರಿಕನ್ ಮತ್ತು ಇತರೆ ವಿದೇಶೀ ಸೈನಿಕರಿಗೆ ವಿಶ್ರಾಂತಿ, ರಂಜನೆಯ ಸೇವೆ ಒದಗಿಸಲು ಏಷಿಯಾದ ಮಹಿಳೆಯರನ್ನು ಬಳಸಿಕೊಳ್ಳಲಾಯಿತು.

ಆರ್ಥಿಕ ಆಕ್ರಮಣದ ಮಾರಕ ಕಾಲದಲ್ಲಿ ಏಷಿಯ ಮಹಿಳೆಯರು ಸಿರಿವಂತ ದೇಶಗಳಿಗೆ ವಿಶ್ರಾಂತಿ, ರಂಜನೆಯ ಸೇವೆ ಒದಗಿಸುವ ಪರಿಸ್ಥಿತಿ ಉಂಟಾಗಿದೆ. ಜಪಾನಿನ ಕ್ಯಾಸಿನೊ ಕಂಪ್ಯೂಟರ್ಸ್ ಮತ್ತು ಬೇರೆ ದೇಶಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅಮೆರಿಕದ ಬಹುರಾಷ್ಟ್ರೀಯ ಸಂಸ್ಥೆಗಳು ಸಿಬ್ಬಂದಿಗೆ ವಿಶೇಷ ಭತ್ಯೆ ಕೊಟ್ಟು ಫಿಲಿಪೈನ್ಸ್, ಥೈಲೆಂಡ್, ತೈವಾನ್ ಮತ್ತು ದ.ಕೊರಿಯಾ ದೇಶಗಳಿಗೆ ಕಳಿಸಿಕೊಡುತ್ತವೆ. ಈ ಸಮಾಜಗಳಲ್ಲಿ ಮಹಿಳೆ ಮತ್ತು ಮಕ್ಕಳ ಲೈಂಗಿಕ ದುಡಿಮೆಯನ್ನು ಬಳಸಿಕೊಳ್ಳುತ್ತಿರುವ ರೀತಿ, ಜಾಗತಿಕ ರಾಜಕೀಯ, ಆರ್ಥಿಕತೆಯ ಪೂರ್ವ–ಪಶ್ಚಿಮ ತಾರತಮ್ಯ ತೋರುತ್ತದೆ. ಪರೋಕ್ಷವಾಗಿ ಅಥವಾ ಅಪರೋಕ್ಷವಾಗಿ ಮೂರನೆ ಜಗತ್ತಿನ ದೇಶಗಳ ಮೇಲೆ ಬಲಾತ್ಕಾರವಾಗಿ ಹೇರಿರುವ ಆರ್ಥಿಕ ಪ್ರಗತಿಯ ಕಾರ್ಯಾಚರಣೆಯ ಮಾದರಿಗಳನ್ನು ಕೂಡ ತೋರುತ್ತದೆ. ಆದ್ದರಿಂದ ಬಡತನ ಮತ್ತು ಈ ಹೊಸ ಬಗೆಯ ವೇಶ್ಯಾಗಾರಿಕೆಗಳು ಉತ್ತರ ದೇಶಗಳ ಬಲಿಷ್ಠ ಶಕ್ತಿಗಳು, ದಕ್ಷಿಣದಲ್ಲಿ ಬೆಳೆಸುತ್ತಿರುವ ಆರ್ಥಿಕ ಅಭಿವೃದ್ಧಿ ಮಾದರಿಯ ಫಲಿತಾಂಶಗಳು ಪುರುಷ ಪ್ರಧಾನ ವ್ಯವಸ್ಥೆ, ಈ ಶಕ್ತಿಗಳಿಗೆ ಸಂಬಂಧಿಸಿದಂತೆ ಅಥವಾ ಈ ಶಕ್ತಿಗಳಿಗೆ ವಿಧೇಯವಾಗಿ ಕಾರ್ಯನಿರ್ವಹಿಸುತ್ತದೆ. ಈ ಅಂಶವನ್ನು ವಿಷದಪಡಿಸಲು ಒಂದು ವಿಲಕ್ಷಣ ಉದಾಹರಣೆ ಕೊಡಲು ವಿಷಾದವಾಗುತ್ತಿದೆ. ಕಳೆದ ಕೆಲವು ವರ್ಷಗಳಿಂದ ಥೈಲ್ಯಾಂಡ್ ಮತ್ತು ನೇಪಾಳ ದೇಶಗಳಲ್ಲಿ ವೇಶ್ಯಾಗೃಹಗಳಿಗೆ ಹೆಣ್ಣುಮಕ್ಕಳನ್ನು ಕಳಿಸುವ ಜನಾಂಗಗಳು, ಹೆಣ್ಣುಶಿಶು ಜನನವನ್ನ ಸಂಭ್ರಮದಿಂದ ಸ್ವಾಗತಿಸಲಾರಂಭಿಸಿದ್ದಾರೆ.

ಈ ಆಚರಣೆ ಈ ಜನಾಂಗಗಳಲ್ಲಿ ಹಿಂದೆಂದೂ ರೂಢಿಯಲ್ಲಿರಲಿಲ್ಲ. ಸಾಮಾನ್ಯವಾಗಿ ಪೋಷಕರು ಗಂಡುಮಗುವನ್ನು ಇಷ್ಟಪಡುತ್ತಿದ್ದರು. ವ್ಯಂಗ್ಯವೆಂದರೆ ಈ ಸಂದರ್ಭದಲ್ಲಿ ಅದು ಅಷ್ಟು ಕ್ರೂರವಾಗಿ ಕಾಣದಿರುವುದು. ಉತ್ತರ ಥೈಲ್ಯಾಂಡಿನ ಡಾನ್ ಜಿಲ್ಲೆಯಲ್ಲಿ ಹೊಸ ಹಾಡೊಂದು ಜನಪ್ರಿಯವಾಗತೊಡಗಿದೆ. ಹೊಸದಾಗಿ ಹುಟ್ಟಿದ ಹೆಣ್ಣುಮಗುವನ್ನು ಹರ್ಷದಿಂದ ಹಾಡಿ ಸ್ವಾಗತಿಸುತ್ತಾರೆ. ಯಾಕೆಂದರೆ ಅವಳು ತನ್ನ ಹುಟ್ಟಿನೊಂದಿಗೆ ಚಿನ್ನ, ಬೆಳ್ಳಿಯ ಭರವಸೆ ತರುತ್ತಾಳೆ. ಇಂತಹ ಪರಿಸ್ಥಿತಿಯಲ್ಲಿ ಪಾಶ್ಚಿಮಾತ್ಯ ಮತ್ತು ಉತ್ತರದೇಶಗಳ ಸ್ತ್ರೀವಾದಿ ಸಂಘಟನೆಗಳು, ದಕ್ಷಿಣ ದೇಶಗಳ ಸ್ತ್ರೀವಾದಿ ಸಂಘಟನೆಗಳಿಗೆ ಯಾವ ರೀತಿಯ ಬೆಂಬಲ ತೋರಲು ಸಾಧ್ಯ? ಮಹಿಳೆಯರು ಮತ್ತು ಬಾಲಕಿಯರನ್ನು ಕೇವಲ ಲೈಂಗಿಕ ಹಿಂಸೆಯ ಬಲಿಪಶುಗಳನ್ನಾಗಿ ಕಂಡು, ಪುರುಷ ಪ್ರಾಧಾನ್ಯದ ಪೈಶಾಚಿಕತೆ ವಿರುದ್ಧ ಜಾಗತಿಕ ಸಹೋದರತ್ವವನ್ನು ಜಾಗೃತಗೊಳಿಸಿದರೆ ಸಾಲದು. ಪಶ್ಚಿಮ ಜಗತ್ತಿನ ಸ್ತ್ರೀವಾದಿ ಸಂಘಟನೆಗಳು, ತಮ್ಮ ಸರ್ಕಾರಗಳು ದಕ್ಷಿಣ ಮತ್ತು ಪೂರ್ವ ದೇಶಗಳ ಮೇಲೆ ಆರ್ಥಿಕ ಮತ್ತು ಮಿಲಿಟರಿ ಆಕ್ರಮಣ ನಡೆಸಿ ಇಲ್ಲಿನ ಸಮುದಾಯಗಳು, ಮಹಿಳೆ ಮತ್ತು ಮಕ್ಕಳನ್ನು ಅಪಮೌಲ್ಯಗೊಳಿಸುತ್ತಿರುವುದನ್ನು ಪರಿಣಾಮಕಾರಿಯಾಗಿ ಗುರುತಿಸಿ ಸೂಕ್ತ ಕ್ರಿಯಾಶೀಲತೆ ಮತ್ತು ತಂತ್ರಗಳನ್ನ ರೂಪಿಸಿಕೊಳ್ಳಬೇಕಿದೆ.

*ಮೂಲ: ಜ್ಯೋತಿ ಸಂಘೇರಾ, Poverty and Prostitution in Asia: Redifining some categories - GAATW.*

## ಕಾಂಬೋಡಿಯಾದ ಸೆಕ್ಸ್‌ವರ್ಕ್

ಗ್ರಾಮೀಣ ಪ್ರದೇಶ ಮತ್ತು ನೆರೆ ದೇಶಗಳಿಂದ ಮಹಿಳೆ, ಮಕ್ಕಳನ್ನ ಕಳವು ಮಾಡಿ ಕಾಂಬೋಡಿಯ ನಗರಗಳಿಗೆ ಅದರಲ್ಲೂ ಫ್ನೋಮ್ ಪೆನ್ಹ್ ನಗರಕ್ಕೆ ಸಾಗಿಸುತ್ತಿದ್ದಾರೆ. 14 ಸಾವಿರಕ್ಕಿಂತ ಹೆಚ್ಚು ಮಹಿಳೆಯರು ಮತ್ತು ಮಕ್ಕಳು ವೇಶ್ಯಾಗೃಹ, ರಾತ್ರಿ ಕ್ಲಬ್ಬು, ಮಸಾಜ್ ಪಾರ್ಲರ್, ಖಾಸಗಿ ಮನೆ, ಹೋಟೆಲುಗಳಲ್ಲಿ ಇದ್ದಾರೆಂದು ಸರ್ಕಾರಿ ಮಾನವ ಹಕ್ಕುಗಳ ಸಮಿತಿ ಅಂದಾಜು ಮಾಡಿದೆ. ಮಹಿಳಾ ಅಭಿವೃದ್ಧಿ ಏಜೆನ್ಸಿ ಸಂಶೋಧನೆ ಪ್ರಕಾರ ಕಾಂಬೋಡಿಯಾದಲ್ಲಿ 50–55 ಸಾವಿರ ಮಹಿಳೆಯರು ವೇಶ್ಯಾಗೃಹಗಳಲ್ಲಿದ್ದಾರೆ.

ಕಾಂಬೋಡಿಯಾ ಮಾನವ ಹಕ್ಕುಗಳ ಜಾಗೃತ ಸಂಘಟನೆ ಇದನ್ನ ಪರಿಶೀಲಿಸಿದೆ. ವೇಶ್ಯಾಗೃಹಗಳಲ್ಲಿರುವವರ ಪೈಕಿ ಶೇ 35 ಮಹಿಳೆಯರು ವಿಯೆಟ್ನಾಮಿನವರು. 'ಕಾಂಬೋಡಿಯಾ ವುಮೆನ್ಸ್ ಕ್ರೈಸಿಸ್' ಸೆಂಟರಿನ ಅಂಕಿ ಸಂಖ್ಯೆ ಪ್ರಕಾರ ಶೇ 64ರಷ್ಟು ಮಹಿಳೆಯರನ್ನು ಈ ಕಸುಬಿಗೆ ಇಳಿಯುವಂತೆ ಬಲಾತ್ಕರಿಸಿದ್ದಾರೆ, ಶೇ 53ರಷ್ಟು ಮಹಿಳೆಯರು ಉದ್ಯೋಗಾವಕಾಶ ಆಮಿಷಕ್ಕೊಳಗಾದವರು; ಶೇ 11ರಷ್ಟು ಮಹಿಳೆಯರನ್ನು ತಂದೆ–ತಾಯಿ, ಬಂಧು ಬಾಂಧವರೇ ಮಾರಿದ್ದಾರೆ. ಶೇ 1ಕ್ಕಿಂತ ಕಡಿಮೆ ಮಹಿಳೆಯರು ಕಳುವಾದವರು, ಮತ್ತು ಶೇ 35ರಷ್ಟು ಮಹಿಳೆಯರು ತೀವ್ರ ಬಡತನದಿಂದ ಈ ಕಸುಬಿಗಿಳಿದಿದ್ದಾರೆ. ಮಹಿಳೆಯರ ವಿಕ್ರಯ ಮಾಡುವವರು ಮೊದಲು ಬಟ್ಟೆ ಕಾರ್ಖಾನೆ ಅಥವಾ ಮನೆಗೆಲಸದ ಆಮಿಷ ಒಡ್ಡುತ್ತಾರೆ ಅಥವಾ ಫ್ನೋಮ್ ಪೆನ್ಹ್ ನಗರಕ್ಕೆ ಬರುವಂತೆ ಮನ ಒಲಿಸುತ್ತಾರೆ. ಕೆಲವು ಸಲ ಸಾಲದ ಬಾಧೆಯಿಂದ ಮುಕ್ತರಾಗಲು ಅಥವಾ ಕುಟುಂಬದ ಸದಸ್ಯರ ವೈದ್ಯಕೀಯ ವೆಚ್ಚ ಭರಿಸಲು ಹೆಣ್ಣುಮಕ್ಕಳು ತಾವೇ ಈ ಕಸುಬಿಗಿಳಿಯುತ್ತಾರೆ.

*ಮೂಲ: ಸಾಮ್ ವುತೀ, Prostitution situation in Cambodian, Cambodian women's development agency.*

ರಾಷ್ಟ್ರಪಿತನ ಜನ್ಮದಿನಾಚರಣೆ

೨ನೇ ಅಕ್ಟೋಬರ್ ೨೦೦೮

# ಅಂತರ್ ರಾಷ್ಟ್ರೀಯ ಅಹಿಂಸಾ ದಿನಾಚರಣೆ

# ನನ್ನ ಕನಸಿನ ಭಾರತ

"ಬಡ ಜನತೆಯು ಭಾರತ ದೇಶವನ್ನು ತಮ್ಮ ನಾಡೆಂದು, ಈ ನಾಡನ್ನು ಕಟ್ಟುವಲ್ಲಿ ತಮ್ಮ ದನಿಗೂ ಮಹತ್ವವಿದೆಯೆಂದು ಭಾವಿಸುವಂತಹ ದೇಶಕ್ಕಾಗಿ ನಾನು ಶ್ರಮಿಸುತ್ತೇನೆ. ಮೇಲ್ವರ್ಗ ಮತ್ತು ಕೆಳವರ್ಗ ಎಂಬ ಭೇದವಿಲ್ಲದ ವರ್ಗರಹಿತ ಭಾರತವಾಗಿ, ಎಲ್ಲ ಸಮುದಾಯದವರು ಸೌಹಾರ್ದಯುತವಾಗಿ ಬಾಳ್ವೆ ನಡೆಸುವಂತಹ ಭಾರತವನ್ನು ಕಟ್ಟಲು ನಾನು ದುಡಿಯುತ್ತೇನೆ. ಅಸ್ಪೃಶ್ಯತೆ, ಮದ್ಯಪಾನ ಅಥವಾ ಮಾದಕ ದ್ರವ್ಯದಂತಹ ಶಾಪಗಳಿಂದ ಮುಕ್ತವಾದಂತಹ ಭಾರತವನ್ನು, ಸ್ತ್ರೀ-ಪುರುಷರಿಗೆ ಸಮಾನ ಹಕ್ಕುಳ್ಳ ಭಾರತವನ್ನು, ವಿಶ್ವದ ಎಲ್ಲ ರಾಷ್ಟ್ರಗಳೊಂದಿಗೆ ಶಾಂತಿಯುತ ಸಂಬಂಧ ಹೊಂದಿರುವಂತಹ ಭಾರತವನ್ನು ಕಟ್ಟಲು ನಾನು ಪ್ರಯತ್ನಿಸುತ್ತೇನೆ. ಇದು ನನ್ನ ಕನಸಿನ ಭಾರತ."

*-ಮಹಾತ್ಮ ಗಾಂಧಿ*


ಕರ್ನಾಟಕ ವಾರ್ತೆ

Registered with Registrar of Newspapers of India under No. KARKAN/2007/22289
'NAMMA MANASA', REGD. No. : MAG(3) NPP/399(A) / 2006-07 KA/BGS/2074/2007-0

# ನಮ್ಮ ಮಾನಸ

- ಮಹಿಳೆಯರಿಗೆ ಸಂಬಂಧಿಸಿದ ಲೇಖನಗಳು, ವರದಿಗಳು ವಿಶ್ಲೇಷಣೆಗಳು, ವಿಮರ್ಶೆಗಳು, ಅನುಭವಗಳು, ಕತೆ-ಕವನಗಳನ್ನು ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.
- ಪತ್ರಿಕೆಯು ವಿಷಯಾಧರಿತವಾಗಿದ್ದು, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುವ ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನು ಚರ್ಚಿಸಲಾಗಿದೆ.
- ವಿವಾಹ, ಕುಟುಂಬದಂತಹ ಸಾಮಾಜಿಕ ಸಂಸ್ಥೆಗಳು, ಮನೆಗೆಲಸ, ಸಂಬಳರಹಿತ ದುಡಿಮೆ, ಆರ್ಥಿಕ ನೀತಿ, ಜಾತಿ, ವರ್ಗ, ಸೌಂದರ್ಯ, ಲಿಂಗ, ಹೆಣ್ತನ ಮುಂತಾದ ವಿಷಯಗಳನ್ನು ಚರ್ಚೆಗೊಳಪಡಿಸಿ ಪ್ರಕಟಿಸಲಾಗಿದೆ. ಗುತ್ತಿಗೆ ಪೌರಕಾರ್ಮಿಕರ ಹೋರಾಟಗಳಿಗೆ ಸ್ಪಂದಿಸಿ ಲೇಖನಗಳನ್ನು ಪ್ರಕಟಿಸಿದೆ.
- ಆರೋಗ್ಯ, ಲೈಂಗಿಕತೆ, ಅಪಾಯಕಾರೀ ಗರ್ಭ ನಿರೋಧಕಗಳು, ಆರ್ಥಿಕತೆ ಮತ್ತು ಅಭಿವೃದ್ಧಿ, ಅಭಿವೃದ್ಧಿ ಯೋಜನೆಗಳು ಮುಂತಾದ ವಿಚಾರಗಳನ್ನು ವಿಮರ್ಶೆಗೊಳಪಡಿಸಲಾಗಿದೆ.
- ಅಣ್ವಸ್ತ್ರೀಕರಣ, ಮಿಲಿಟರೀಕರಣ, ಜಾಗತೀಕರಣದಂಥ ಬೆಳವಣಿಗೆಗಳನ್ನು ಮಹಿಳಾ ದೃಷ್ಟಿಕೋನದಿಂದ ಪ್ರಶ್ನಿಸಲಾಗಿದೆ.
- ಇತರ ಪ್ರಜಾಸತ್ತಾತ್ಮಕವಾದ ಸಂಘಟನೆಗಳೊಡನೆ ಕೋಮುವಾದ, ಸಮಾನ ನಾಗರಿಕ ಸಂಹಿತೆ, ಮೀಸಲಾತಿ, ಲೈಂಗಿಕತೆ, ಪರಿಸರ, ಸ್ಥಳಾಂತರ ಮುಂತಾದ ವಿವಾದಗಳನ್ನು ಕುರಿತ ಚರ್ಚೆಗಳಲ್ಲಿ, ಆಂದೋಲನಗಳಲ್ಲಿ ಪಾಲ್ಗೊಳ್ಳಲಾಗಿದೆ.
- ಸ್ವಸಹಾಯ ಸಂಘಗಳನ್ನು ರಚಿಸುವ ಮೂಲಕ ಮಹಿಳೆಯರ ಸಬಲತೆಗೆ ಪ್ರೋತ್ಸಾಹ ನೀಡಲಾಗಿದೆ.
- ನಮ್ಮದೇ ಮಿತಿಯಲ್ಲಿ ತೊಂದರೆಗೊಳಗಾದ ಮಹಿಳೆಯರಿಗೆ ಸಲಹೆ, ನೈತಿಕ ಬೆಂಬಲಗಳಲ್ಲದೆ ಕಾನೂನಿನ ನೆರವನ್ನು ನೀಡುತ್ತಿದ್ದೇವೆ.
- ಮಹಿಳೆಯರು ತಾವಿದ್ದೆಡೆಯಲ್ಲಿ ಮಹಿಳಾ ಪತ್ರಿಕೆಗಳನ್ನು ಹೊರತರಲು ಪ್ರಯತ್ನಿಸಿದಲ್ಲಿ, ಗುಂಪುಗಳನ್ನು ರಚಿಸಬೇಕಾದಲ್ಲಿ ಸಹಕರಿಸಲು ಉದ್ದೇಶಿಸಿದ್ದೇವೆ.

Registered Magazine

*Posted on 9th of every month at Chamarajpet Post Office*

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು - 560 018